ಹರಿಹರದೇವ ಕೃತ

# ಪುರಾತನರ ಆರು ರಗಳೆಗಳು

ಸಂಪಾದಕರು :

ಡಾ|| ಆರ್. ಸಿ. ಹಿರೇಮಠ, ಎಂ.ಎ., ಪಿಎಚ್.ಡಿ.

ಕನ್ನಡ ಪ್ರಾಧ್ಯಾಪಕರು
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ






ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೧೯೭೩

ಕನ್ನಡ ಕಾವ್ಯಮಾಲೆ : ೮

ಹರಿಹರದೇವ ಕೃತ

# ಪುರಾತನರ ಆರು ರಗಳೆಗಳು




ಸಂಪಾದಕರು :

ಡಾ|| ಆರ್. ಸಿ. ಹಿರೇಮಠ, ಎಂ.ಎ., ಪಿಎಚ್.ಡಿ.

ಕನ್ನಡ ಪ್ರಾಧ್ಯಾಪಕರು

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೯೭೩

ಪ್ರಕಾಶಕರು :

ಎಸ್. ಎಸ್. ಒಡೆಯರ, ಎಂ.ಎ., ಎಲ್‌ಎಲ್.ಬಿ.
ರಜಿಸ್ಟ್ರಾರ್, ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ.



ಪ್ರಥಮ ಮುದ್ರಣ: ೧೯೬೮
೧೦೦೦ ಪ್ರತಿಗಳು.
ದ್ವಿತೀಯ ಮುದ್ರಣ: ಜೂನ್, ೧೯೭೩
೧೫೦೦ ಪ್ರತಿಗಳು.



ಬೆಲೆ : ~~ಸಾದಾ ಪ್ರತಿ: ರೂ. ೩-೫೦~~
ಉತ್ತಮ ಪ್ರತಿ: ರೂ ೫-೦೦



ಮುದ್ರಕರು :

ಫ. ಶಿ. ಭಾಂಡಗೆ,
ವಿದ್ಯಾವಾಹಿನಿ ವಿದ್ಯುನ್ಮುದ್ರಣ (ಪುಸ್ತಕ ವಿಭಾಗ)
ಗಂಗಾಪೂರಪೇಟ, ಗದಗ.

## ಪರಿವಿಡಿ

# ಮೊದಲ ಮಾತು

## (ಪ್ರಥಮ ಮುದ್ರಣ)

ಮಹಾಕವಿ ಹರಿಹರದೇವನ ಸಮಗ್ರ ರಗಳೆಗಳ ಸಂಶೋಧನ ಹಾಗೂ ಪ್ರಕಟನ ಕಾರ್ಯವನ್ನು ಕೈಕೊಂಡು ಹಲವು ವರ್ಷಗಳು ಸಂದಿವೆ. ಅದಕ್ಕಾಗಿ ಅತಿಪರಿಶ್ರಮದಿಂದ ಆತನ ರಗಳೆಗಳ ಹಲವು ತಾಳೆಯೋಲೆಯ ಪ್ರತಿಗಳನ್ನು ಸಂಗ್ರಹಿಸಲಾಗಿದೆ. ಆ ಕಟ್ಟುಗಳಲ್ಲಿ ದೊರೆವ ರಗಳೆಗಳಲ್ಲಿ ಹರಿಹರನವು ಯಾವುವು, ಅನ್ಯರವು ಯಾವುವು ಎಂಬುದನ್ನು ಕೂಲಂಕಷವಾಗಿ ಪರೀಕ್ಷಿಸಿ ವಿಂಗಡಿಸಿ, ಹರಿಹರನ ರಗಳೆಗಳನ್ನು ಪುರಾತನರ ರಗಳೆಗಳು, ನೂತನ ಪುರಾತನರ ರಗಳೆಗಳು ಹಾಗೂ ಇತರ ರಗಳೆಗಳು ಎಂಬ ಭಾಗಗಳಲ್ಲಿ ಪ್ರಕಟಿಸುವ ಯೋಜನೆ ಯಿದೆ. ಇದೀಗ ಪುರಾತನರ ರಗಳೆಗಳಲ್ಲಿ ಆರನ್ನು ಮಾತ್ರ ಇಲ್ಲಿ ಪ್ರಕಟಿಸಲಾಗಿದೆ. ಈ ಪ್ರಕಟನೆಗೆ ನೆರವಾದ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ವಂದನೆಗಳು. ಮೊದಲಚ್ಚಿನ ಓಲೆಗಳನ್ನು ಜೋಕೆ ತೂಕದಿಂದ ತಿದ್ದಿದ ಶ್ರೀ ಮೇವುಂಡಿ ಮಲ್ಲಾರಿ ಹಾಗೂ ಶ್ರೀ ಕೆ. ಎಸ್. ಪಾಟೀಲ ಮಾಸ್ತರರ ನೆರವನ್ನು ನೆನೆಯುತ್ತೇವೆ. ಇದನ್ನು ಅಂದವಾಗಿ ಅಚ್ಚುಮಾಡಿದ ಬೆಂಗಳೂರಿನ ಮೋಹನ ಮುದ್ರಣಾಲಯದ ಒಡೆಯರಿಗೆ ಋಣಿಯಾಗಿದ್ದೇವೆ.

ಸಂಪಾದಕರು

# ಪ್ರ ಸ್ತಾ ವ ನೆ

## ಕವಿಯ ಕಾಲವಿಚಾರ

ಮಹಾಕವಿ ಹರಿಹರದೇವನ ಕಾಲದ ವಿಷಯ ಕನ್ನಡ ಸಾಹಿತ್ಯ ಚರಿತ್ರೆಯ ಜಟಿಲವಾದ ಸಮಸ್ಯೆಗಳಲ್ಲಿ ಒಂದಾಗಿದೆ. ಈ ಬಗೆಗೆ ಸಂಶೋಧನೆ ಸಮಾಲೋಚನೆಗಳು ಇನ್ನೂ ನಡೆದೇ ಇವೆ. ಅದರ ಫಲಶ್ರುತಿ ಇಷ್ಟು :

೧. ರೆ. ಕಿಟೆಲ್—ಕ್ರಿ.ಶ. ೧೨೯೦; ಛಂದೋಂಬುಧಿಯ ಉಪೋದ್ಘಾತ.

೨. ಆರ್. ನರಸಿಂಹಾಚಾರ್ಯ—ಕ್ರಿ.ಶ. ೧೧೬೫, ಕರ್ನಾಟಕ ಕವಿಚರಿತೆ ಭಾಗ ೧.

೩. ಡಾ. ವೆಂಕಟಸುಬ್ಬಯ್ಯ—ಕ್ರಿ.ಶ. ೧೩೦೦; ಕೆಲವು ಕನ್ನಡ ಕವಿಗಳ ಜೀವನಕಾಲವಿಚಾರ, ಪು. ೨೬೦-೨೭೮.

೪. ಡಾ. ಎ. ಆರ್. ಕೃಷ್ಣಶಾಸ್ತ್ರೀ—ಕ್ರಿ ಶ. ೧೨೦೮; ಹರಿಶ್ಚಂದ್ರಕಾವ್ಯ ಸಂಗ್ರಹ, ಪೀಠಿಕೆ ಪು. XIV.

೫. ಪ್ರೊ. ಕೆ. ಜಿ. ಕುಂದಣಗಾರ ಹಾಗೂ
ಪ್ರೊ. ಎಸ್. ಎಸ್. ಮಾಳವಾಡ—ಕ್ರಿ ಶ. ೧೨೧೬; ಹರಿಹರದೇವ; ಪು. ೪೯-೬೭.

೬. ನಾ. ಶ್ರೀ. ರಾಜಪುರೋಹಿತ—ಕ್ರಿ. ಶ. ೧೨೬೬; ಹರಿಹರದೇವ; ಪು. ೬೮-೭೩.

೭. ಪ್ರೊ. ಡಿ. ಎಲ್. ನರಸಿಂಹಾಚಾರ್ಯ—ಕ್ರಿ.ಶ. ೧೨೪೦, ಸಿದ್ಧರಾಮ ಚಾರಿತ್ರ, ಮುನ್ನುಡಿ ಪು. XV-XXI.

೮. ಶ್ರೀ ಎಚ್. ದೇವೀರಪ್ಪ—ಕ್ರಿ. ಶ. ೧೩೦೦; ಗಿರಿಜಾಕಲ್ಯಾಣ ಮಹಾಪ್ರಬಂಧ (ಸಂಗ್ರಹ), ಮುನ್ನುಡಿ.

೯. ಡಾ. ಆರ್. ಸಿ. ಹಿರೇಮಠ—ಕ್ರಿ. ಶ. ೧೨೨೫; ಮಹಾಕವಿ ರಾಘವಾಂಕ ಪು. ೨೧-೨೮.

೧೦. ಕ್ರಿ.ಶ. ೧೨೭೫; ಪದ್ಮರಾಜ ಪುರಾಣ ಪು. ೭-೨೪.

ಹರಿಹರ ರಾಘವಾಂಕ ಮತ್ತು ಕೆರೆಯ ಪದ್ಮರಸರು ಸಮಕಾಲೀನರೆಂದು ರಾಘವಾಂಕಚರಿತೆ ಹಾಗೂ ಇತರ ಕೃತಿಗಳಿಂದ ತಿಳಿದುಬರುತ್ತದೆ೧.

ಆದುದರಿಂದ ಇವರಲ್ಲಿ ಯಾರೊಬ್ಬರ ಕಾಲದ ವಿಷಯವನ್ನು ವಿವೇಚಿಸ ಬೇಕಾದರೂ ಮಿಕ್ಕವರ ಪ್ರಸ್ತಾಪವನ್ನು ಸಂದರ್ಭೋಚಿತವಾಗಿ ಮಾಡಲೇ ಬೇಕಾಗುತ್ತದೆ.

ಹರಿಹರದೇವನೊರೆದ ನೂರರ ಸಂಖ್ಯೆಯನ್ನು ಮೀರಿದ ರಗಳೆಗಳಲ್ಲಿ ಏಕಾಂತ ರಾಮಯ್ಯನ ರಗಳೆಯೂ ಒಂದು. ಏಕಾಂತರಾಮಯ್ಯನು ಕ್ರಿ.ಶ. ೧೨೦೦ರ ವರೆಗೆ ಜೀವಿಸಿರಬಹುದು೨. ಹರಿಹರನು ಆಮೇಲೆ ಅವನ ರಗಳೆಯನ್ನು ರಚಿಸಿರುವನು.

ಹರಿಹರದೇವನು ರಚಿಸಿದ ಹಾವಿನಹಾಳ ಕಲ್ಲಯ್ಯನ ರಗಳೆಯೂ ಇದಕ್ಕೆ ಉಪಷ್ಟಂಭಕವಾಗಬಲ್ಲುದು. ಬಿಜ್ಜಳನು ಅಳಿದ ಮೇಲೆ (೧೧೬೭ ರ ಅನಂತರ) ಸಿದ್ಧರಾಮನು ಕೆಲಕಾಲ ಜೀವಿಸಿರುವನು. ಬಿಜ್ಜಳನ ತಮ್ಮ ಕರ್ಣದೇವನು ತನಗೆ ಸ್ಥಿರಪಟ್ಟ ಕಟ್ಟುವುದಕ್ಕೋಸುಗ ಸಿದ್ಧರಾಮನು ಬಿಜಯಂಗೈಸಬೇಕೆಂದು ಆತನ ಸನ್ನಿಧಿಗೆ ಪ್ರಾರ್ಥನೆಯೊಂದಿಗೆ ಸಚಿವರನ್ನು ಕಳಿಸುವನು.

ಬಿಜ್ಜಳನ ಮರಣಾನಂತರ ಕೆಲಕಾಲ ಜೀವಿಸಿದ ಸಿದ್ಧರಾಮನು ಹಾವಿನಹಾಳ ಕಲ್ಲಯ್ಯ ಮೊದಲಾದ ಗುಡ್ಡರಿಗೆ ತನ್ನ ಸರ್ವನೇಮವ ನಡೆಸಲು ಅಪ್ಪಣೆಕೊಟ್ಟು ಸಮಾಧಿಸ್ಥನಾಗುವನು೩. ಆಮೇಲೆ ಹಾವಿನಾಳ ಕಲ್ಲಯ್ಯನು ಲಿಂಗೈಕ್ಯನಾಗಿರುವನು೪. ಇಷ್ಟೆಲ್ಲ ಘಟನೆ ನಡೆಯಲು ಸು. ೧೨–೧೫ ವರ್ಷಗಳಾದರೂ ಸಂದಿರುವ ಸಂಭವವಿದೆ. ಹಾವಿನಾಳ ಕಲ್ಲಯ್ಯನೂ ಸು. ೧೧೯೦ರ ವರೆಗೆ ಜೀವಿಸಿರಬಹುದು. ಆ ಮೇಲೆ ಹರಿಹರನು ಆತನ ರಗಳೆಯನ್ನು ಬರೆದಿರುವನು.

ಹರಿಹರನು ಪಂಪಾವಿರೂಪಾಕ್ಷನ ಮುಂದಣ ತೆರೆಗೆ ಹತ್ತಿದ ಉರಿಯನ್ನೊರಸಿದ ಪವಾಡ ನಡೆದುದು ರಾಘವಾಂಕ ಚಾರಿತ್ರದನ್ವಯ ಕ್ರಿ.ಶ. ೧೨೧೬ರಲ್ಲಿ೫.

---

೧ಹ. ಕಾ. ಸ್ಥ ೧. ಪ. ೩; ಸಿ. ಚಾ. ಸಂ. ೧ ಪ ೧೨; ಸೋ. ಚಾ. ಸ್ಥ ೧ ಪ ೨೫; ವೀ. ಚ. ಸಂ. ೧ ಪ ೮; ರಾ. ಚಾ. ಸಂ. ೨ ಪ. ೫೦–೬೦; ರಾ. ಚಾ. ಸಂ. ೧೬ ಪ ೨೮; ಚೆ. ಬ. ಪು. ಸಂ. ೬೨ ಪ. ೫೬; ಪ. ಪು. ಸಂ. ೧೩ ಪ ೨೩. ೨ಪ. ಪು. ಪ್ರ ೯; ಮ. ಶಾ. ಪು. ೨೪. ೩ಸಿ. ಚಾ. ಸಂ. ೯, ಪ ೧–೪. ೪ಸಿ. ಚಾ. ಸಂ. ೯ ಪ ೫೩–೬೦. ೫ರಾ. ಚಾ. ಸಂ. ೧೪, ಪ. ೫೭–೫೯; ಹರಿಹರದೇವ ಪು. ೨೫.

ರಾಘವಾಂಕನು ತನ್ನ ಷಟ್ಪದಿಕಾವ್ಯಗಳಲ್ಲಿ ಕೆಲವನ್ನಾದರೂ ಕ್ರಿ. ಶ. ೧೨೩೪ರ ಪೂರ್ವದಲ್ಲಿ ಬರೆದು ಷಟ್ಪದೀಸಂಸ್ಥಾಪನಾಚಾರ್ಯನಾಗಿರಬೇಕು೧. ಏಕೆಂದರೆ ಕ್ರಿ ಶ. ೧೨೨೪ರಲ್ಲಿ ಪೋಲಾಳ್ವದಂಡನಾಥನು ಹರಿಚಾರಿತ್ರವೆಂಬ ಗ್ರಂಥವನ್ನು ಷಟ್ಪದಿಯಲ್ಲಿ ರಚಿಸಿರುವದಾಗಿ ದಾವಣಗೆರೆಯ ೩೫ನೆಯ ಶಾಸನದಿಂದ ವ್ಯಕ್ತವಾಗುತ್ತದೆ. ಪೋಲಾಳ್ವದಂಡನಾಥನೇ 'ಮೊದಲು ಷಟ್ಪದಿಯಲ್ಲಿ ಕಾವ್ಯಬರೆದ'ನೆಂಬ ಉಲ್ಲೇಖ ಇದುವರೆಗೆ ಎಲ್ಲಿಯೂ ದೊರೆತಿರುವುದಿಲ್ಲ.

ಹರಿಹರನು ತನ್ನ ಗಿರಿಜಾಕಲ್ಯಾಣವನ್ನು ಕ್ರಿ ಶ. ೧೨೪೫ರ ಪೂರ್ವದಲ್ಲಿಯೇ ರಚಿಸಿರಬೇಕು. ಏಕೆಂದರೆ ಸೂಕ್ತಿಸುಧಾರ್ಣವ (ಕ್ರಿ. ಶ. ೧೨೪೫)ದಲ್ಲಿ ಗಿರಿಜಾ ಕಲ್ಯಾಣದಿಂದ ಅನೇಕ ಪದ್ಯಗಳು ಉದ್ಧೃತವಾಗಿವೆ೨.

ಕೆರೆಯ ಪದ್ಮರಸರು ತ್ರಿಭುವನತಾತನನ್ನು ನರಸಿಂಹಬಲ್ಲಾಳನ ಸಭೆಯೊಳಗೆ ವಾದದಲ್ಲಿ ಸೋಲಿಸಿದರೆಂಬ ವಿಷಯ ಪದ್ಮರಾಜಪುರಾಣದಲ್ಲಿ ಬರುತ್ತದೆ೩. ಆಗ ಕೆರೆಯ ಪದ್ಮರಸರೊಡನೆ ಉಭಯಕವಿ ಶರಭ ಭೇರುಂಡನೆನಿಸಿದ ರಾಘವಾಂಕ, ಹುಲಿಗೆರೆಯ ಮಾಯಿದೇವ ಪುರಾಣಭಟ್ಟ ಮೊದಲಾದವರು ಹೋಗಿದ್ದರೆಂದು ಅದೇ ಕಾವ್ಯದಿಂದಲೇ ತಿಳಿದುಬರುತ್ತದೆ೪. ಹುಲಿಗೆರೆಯ ಪುರಾಣದ ಮಾಯಿಪಂಡಿತ (ಮಾಯಿದೇವ ಪುರಾಣಪಂಡಿತ)ರ ಗುರು ಶಿವರಾತ್ರಿ ಮಾಯಿದೇವ. ಈ ಶಿವರಾತ್ರಿ ಮಾಯಿದೇವರಿಗೆ ಕ್ರಿ ಶ. ೧೨೪೫ರಲ್ಲಿ ಗೊಪೆಯ ಶಿವದೇವ (ಕ್ರಿ ಶ ೧೨೩೬)ನ ಮಗನು ಒಂದು ಹೂದೋಟವನ್ನು ದಾನವಾಗಿ ಕೊಟ್ಟನೆಂದು ಹಾಸನ ಜಿಲ್ಲೆಯ ಬೇಲೂರ ತಾಲೂಕಿನ ೨೪೪ನೆಯ ಶಾಸನದಲ್ಲಿ ಹೇಳಲಾಗಿದೆ. ಆದುದರಿಂದ ಕೆರೆಯ ಪದ್ಮರಸ, ರಾಘವಾಂಕ, ಹುಲಿಗೆರೆಯ ಪುರಾಣದ ಮಾಯಿದೇವ ಮೊದಲಾದವರು ಕ್ರಿ. ಶ. ೧೨೬೦ರಲ್ಲಿ ಜೀವಿಸಿದ್ದರೆಂದು ಇಟ್ಟುಕೊಳ್ಳಬಹುದು.

ಪದ್ಮರಾಜ ಪುರಾಣದ ಕೊನೆಯಲ್ಲಿ೫ ಶಿವನು ವಿಧವೆಯೋರ್ವಳ ಕಷ್ಟಾರ್ಜಿತ ಧನವನ್ನು ಅಪಹರಿಸಿ ತಂದು ಪದ್ಮರಸರಿಗೆ ಪಡಿಹೊನ್ನು ಕೊಟ್ಟ ಕಥೆಯೊಂದು ಬಂದಿದೆ. ಧನವನ್ನು ಕಳೆದುಕೊಂಡ ಆ ಬಡವೆಯ ಗೋಳನ್ನು ಕೇಳಿ ಕನಿಕರಪಟ್ಟು

---

೧ ರಾಘವಾಂಕನು ಷಟ್ಪದೀಸಂಸ್ಥಾಪಕನೆಂದು ಸಿದ್ಧನಂಜೇಶ ಮೊದಲಾದವರು ಸ್ಪಷ್ಟವಾಗಿ ಹೇಳಿದ್ದಾರೆ. ಆತನ ಷಟ್ಪದಿಗಳಲ್ಲಿ ಮಾತಿನ ಹೊಸ ಪ್ರಯೋಗ, ಅವುಗಳ ಅವಸ್ಥೆ ಈ ಮಾತಿಗೆ ನಿದರ್ಶನ (ಮ. ರಾ. ಪು ೨೫೦–೨೫೫ ನೋಡಿರಿ.). ೨ಮ. ರಾ. ಪು ೨೫–೨೬; ಪ. ಪು. ಪ್ರ. ಪು ೧೯. ೩ಪ. ಪು. ಸಂ ೯, ಪ. ೧೨. ೪ಪ. ಪು. ಸಂ. ೯ ಪ. ೨೯–೩೦. ೫ಪ. ಪು. ೧೫ಸಂ. ೩. ಪ ೯.

ಪದ್ಮರಸರು 'ವಿತ್ತನಾಥಾಪ್ತನೂ ಸುವರ್ಣಾದ್ರಿವಾಸನೂ ಆದ ಶಿವನು ಗಣಪತಿ ನೃಪಾಲನ ಮನೆಯ ವಿತ್ತವನ್ನು ಕೊಂಡರೆ ಕೊಳ್ಳಲಿ, ಬಡವೆಯ ತುತ್ತನ್ನೇಕೆ ಅಪಹರಿಸಿದನು ?' ಎಂದು ಉದ್ಗಾರ ತೆಗೆದಿರುವನು. ಈ ಗಣಪತಿ ನೃಪಾಲನು ಕಾಕತೀಯ ಗಣಪತಿಯಿರಬೇಕು. ಈ ಧನದವರು "ಅಟ್ಟಿಬಂದೊಡೆ ಆನೇಂ ಗುಂಡ ಬೊಮ್ಮಯ್ಯನೇ ಕಾಯ್ವರೆ?[೧]" ಎಂದು ಪದ್ಮರಸರು ನುಡಿದಿರುವರು. ಕಾಕತೀಯ ಗಣಪತಿ ದೊರೆಯ ಕಾಲದಲ್ಲಿ ಕಳವುಮಾಡಿ ಬಂದು ಮರೆಹೊಕ್ಕವರನ್ನು ಸಂರಕ್ಷಿಸಲು ಗುಂಡ ಬೊಮ್ಮಯ್ಯನು ಶೂಲಕ್ಕೇರಿದ ಕಥೆಯಿದೆ[೨].

ಈ ಕಾಕತೀಯ ಗಣಪತಿಯ ಕಾಲ ಕ್ರಿ.ಶ. ೧೨೦೦ರಿಂದ ೧೨೬೦. ಕಾಕತೀಯ ಗಣಪತಿ ತೀರಿಹೋದ ಮೇಲೆ ಪದ್ಮರಸರು ಈ ಮಾತು ಹೇಳಿರುವುದು ಅಸಾಧ್ಯ. ಶೈವಪಕ್ಷಪಾತಿಯೂ ಶಿವಭಕ್ತನೂ ಆದ ಈ ದೊರೆ ಆಳುತ್ತಿರುವಾಗಲೇ ಪದ್ಮರಸರ ಬಾಯಿಂದ ಈ ಮಾತು ಬಂದಿರಲಿಕ್ಕೆ ಸಾಕು. ಪದ್ಮರಸರ ಜೀವನದ ಕೊನೆಕೊನೆಗೆ ಈ ಘಟನೆ ನಡೆದಂತೆ ಊಹಿಸಬಹುದಾದುದರಿಂದ ಮೇಲಿನ ನಿರ್ಣಯಕ್ಕೆ ಈ ಮಾತು ಪುಷ್ಟಿ ಕೊಡುವಂತಿದೆ.

ಈ ಆಧಾರಗಳ ಬಲದಿಂದ ಹರಿಹರ, ರಾಘವಾಂಕ, ಕೆರೆಯ ಪದ್ಮರಸರು ದೀರ್ಘಾಯುಷ್ಯವನ್ನು ಪಡೆದು ಹದಿಮೂರನೆಯ ಶತಮಾನದ ಮುಕ್ಕಾಲು ಭಾಗ ವನ್ನು ಸಹಜವಾಗಿಯೇ ವ್ಯಾಪಿಸಿರುವರೆಂದು ಹೇಳಬಹುದು.

## ಜೀವನ ಚರಿತ್ರೆ

ಹರಿಹರದೇವನ ಜೀವನ ಚರಿತ್ರೆ ಅವನ ಕೃತಿಗಳಲ್ಲಿ ವಿಸ್ತಾರವಾಗಿ ದೊರೆಯುವ ದಿಲ್ಲವಾದರೂ ರಾಘವಾಂಕಚಾರಿತ್ರ, ಚನ್ನಬಸವಪುರಾಣ, ಪದ್ಮರಾಜಪುರಾಣ ಮುಂತಾದ ಕೃತಿಗಳಲ್ಲಿ ದೊರೆಯುವ ಉಲ್ಲೇಖಗಳಿಂದ ಅವನ ಜೀವನ ಚರಿತ್ರೆಯನ್ನು ಸ್ಥೂಲವಾಗಿ ತಿಳಿದುಕೊಳ್ಳಬಹುದು.

ಹಂಪೆಯ ಶರ್ವಾಣಿ ಮತ್ತು ಮಹಾದೇವರೆಂಬ ದಂಪತಿಗಳು ಹರಿಹರನ ತಂದೆ ತಾಯಿಗಳು[೩]. ಹರಿಹರನ ತಂದೆತಾಯಿಗಳು ಉಜ್ವಲ ಶಿವಭಕ್ತರೂ ಶಿವಾಭಿ ಮಾನಿಗಳೂ ಆಗಿದ್ದರು. ಹರಿಹರನಲ್ಲಿ ತಂದೆತಾಯಿಗಳ ಈ ಶಿವಭಕ್ತಿ ಬಾಲ್ಯದಲ್ಲಿಯೇ ತಲೆದೋರಿತು. ಹರಿಹರನ ಗುರು ಶೈವಸಾರೋದಯನಾದ ಹಂಪೆಯ ಮಾಯಿದೇವ.

---

೧ಪ. ಪು.ಸಂ. ೧೩, ಪ. ೭. ೨ಪ.ಪು. ಸಂ. ೧೩, ಪ.೯. ೩ರಾ. ಚಾ. ಸಂ ೧೪, ಪ.೪೬.

ತಾನು ಮಾಯಿದೇವನ ಶಿಷ್ಯನೆಂಬ ಸಂಗತಿಯನ್ನು ಅತ್ಯಂತ ಅಭಿಮಾನದಿಂದ ಹೇಳಿಕೊಂಡಿದ್ದಾನೆ. ಈ ಗುರುವಿನ 'ಹತ್ತಿರ ವಿದ್ಯಾಭ್ಯಾಸ ಮಾಡಿದ ಹರಿಹರದೇವನು ವೇದವೇದಾಂಗ ಪುರಾಣೇತಿಹಾಸ ಕಾವ್ಯ ನಾಟಕ ಅಲಂಕಾರ ವ್ಯಾಕರಣ ಮುಂತಾದ ವಿಷಯುಗಳಲ್ಲಿ ಅತಿಶಯುವಾದ ಪ್ರಾವೀಣ್ಯವನ್ನು ಪಡೆದನು. ಗಿರಿಜಾಕಲ್ಯಾಣ ಮಹಾ ಪ್ರಬಂಧವು ಅವನ ಪಾಂಡಿತ್ಯಕ್ಕೆ ನಿಕಷವನ್ನೊದಗಿಸುತ್ತದೆ.

ಹರಿಹರನಿಗೆ ಒಬ್ಬ ಸೋದರಿಯಿದ್ದಳೆಂದೂ ಅವಳೇ ಮಹಾಕವಿ ರಾಘವಾಂಕನ ತಾಯಿಯೆಂದೂ ತಿಳಿದುಬರುತ್ತದೆ೧. ರಾಘವಾಂಕಚಾರಿತ್ರದಲ್ಲಿ ಹರಿಹರನ ಸೋದರಳಿಯನಾದ ರಾಘವಾಂಕನ ತಾಯಿಯ ಹೆಸರು ರುದ್ರಾಣಿಯೆಂದು ಹೇಳಿರುವುದರಿಂದ ಅವಳೇ ಇವನ ಸೋದರಿಯಾಗಿದ್ದಳೆಂದು ಊಹಿಸಲವಕಾಶವಿದೆ೨.

ಹರಿಹರದೇವನು ಹೊಯ್ಸಳ ನರಸಿಂಹ ಬಲ್ಲಾಳನಲ್ಲಿ ಕರಣಿಕಾಗ್ರಣಿಯಾಗಿದ್ದನು೩. ಪಂಪಾವಿರೂಪಾಕ್ಷನ ನಿಸ್ಸೀಮ ಭಕ್ತನಾದ ಈತನು 'ಪರಸೇವೆ ಹೀನ'ವೆಂದು ಬಗೆದು ಕರಣಿಕವೃತ್ತಿಯನ್ನು ತ್ಯಾಗಮಾಡಿ ಹಂಪೆಯತ್ತ ಧಾವಿಸುವನು೪. ಹಂಪೆಯಲ್ಲಿ 'ತನಗೆ ವಿರೂಪಾಕ್ಷನೊರೆದಂತೆ ಗಣಸಂತತಿಯ ಕಥೆಗಳಂ ರಘಟಾಬಂಧಂಗಳಿಂ ರಚಿಸು' ಎಂಬ ಶಿವನಾಜ್ಞೆಯನ್ನು ಅನುಸರಿಸಿ ಆ ಕಾರ್ಯದಲ್ಲಿ ನಿರತನಾಗುವನು೫. ಆಂಧ್ರ ದೇಶದ ಗಣಿಕಾಗ್ರಣಿ ಮಾದೇವಿಯೆಂಬವಳು ಹರಿಹರನ ಕೀರ್ತಿಮಹಿಮೆಗಳಿಗೆ ಮರುಳಾಗಿ ಕಾಮುಲಂಪಟೆಯಾಗಿ ಹಂಪೆಗೈತಂದು ಅವನ ದಿವ್ಯ ವ್ಯಕ್ತಿತ್ವವನ್ನು ಕಂಡು ವೈರಾಗ್ಯ ತಾಳುವಳು೬. ಹರಿಹರನ ಜಿತೇಂದ್ರಿಯತ್ವವನ್ನು ರೂಪಿಸುವ ಸಾಂಕೇತಿಕ ಕಥೆಯಿದು.

ಹರಿಹರದೇವನ ಜೀವನಚರಿತ್ರೆಯನ್ನು ಪ್ರಮುಖ ವಿಷಯುವನ್ನಾಗಿ ಇಟ್ಟುಕೊಂಡು ರಚಿತವಾದ 'ರಾಘವಾಂಕನ ಹರಿಹರಮಹತ್ವ' ಎಂಬ ಕೃತಿ ಉಪಲಬ್ಧವಾಗಿಲ್ಲ. ಅದು ದೊರೆತರೆ ಹರಿಹರನ ಜೀವನಚರಿತ್ರೆಯ ಇನ್ನೂ ಕೆಲವು ವಿಶೇಷಾಂಶಗಳು ಕೈವಶವಾಗಬಹುದು.

---

೧ರಾ.ಚಾ.ಸಂ. ೨, ಪ.೨೩; ಚ.ಬ.ಪು.ಸಂ. ೬೨, ಪ. ೫೬. ೨ರಾ.ಚಾ.ಸಂ. ೨, ಪ. ೨೩. ೩ರಾ.ಚಾ.ಸಂ. ೧೪, ಪ. ೪೭; ಪ.ಪು.ಸಂ. ೪, ಪ. ೨೩; ಪ.ಪು.ಸಂ. ೫, ಪ.೬. ೪ಪ.ಪು.ಸಂ. ೫, ಪ. ೨೦–೨೧. ೫ರಾ.ಚಾ.ಸಂ. ೧೪, ಪ. ೯೪.
೬ರಾ.ಚಾ.ಸಂ. ೧೪, ಪ. ೬೭.

ಪದ್ಮರಸರು 'ವಿತ್ತನಾಥಾಪ್ತನೂ ಸುವರ್ಣಾದ್ರಿವಾಸನೂ ಆದ ಶಿವನು ಗಣಪತಿ ನೃಪಾಲನ ಮನೆಯ ವಿತ್ತವನ್ನು ಕೊಂಡರೆ ಕೊಳ್ಳಲಿ, ಬಡವೆಯ ತುತ್ತನ್ನೇಕೆ ಅಪಹರಿಸಿವನು ?' ಎಂದು ಉದ್ಗಾರ ತೆಗೆದಿರುವನು. ಈ ಗಣಪತಿ ನೃಪಾಲನು ಕಾಕತೀಯ ಗಣಪತಿಯಿರಬೇಕು. ಈ ಧನದವರು "ಅಟ್ಟಿಬಂದೊಡೆ ಆನೇಂ ಗುಂಡ ಬೊಮ್ಮಯ್ಯನೇ ಕಾಯ್ವರೆ?[೧]" ಎಂದು ಪದ್ಮರಸರು ನುಡಿದಿರುವರು. ಕಾಕತೀಯ ಗಣಪತಿ ದೊರೆಯ ಕಾಲದಲ್ಲಿ ಕಳವುಮಾಡಿ ಬಂದು ಮರೆಹೊಕ್ಕವರನ್ನು ಸಂರಕ್ಷಿಸಲು ಗುಂಡ ಬೊಮ್ಮಯ್ಯನು ಶೂಲಕ್ಕೇರಿದ ಕಥೆಯಿದೆ[೨].

ಈ ಕಾಕತೀಯ ಗಣಪತಿಯ ಕಾಲ ಕ್ರಿ.ಶ. ೧೨೦೦ರಿಂದ ೧೨೬೦. ಕಾಕತೀಯ ಗಣಪತಿ ತೀರಿಹೋದ ಮೇಲೆ ಪದ್ಮರಸರು ಈ ಮಾತು ಹೇಳಿರುವುದು ಅಸಾಧ್ಯ. ಶೈವಪಕ್ಷಪಾತಿಯೂ ಶಿವಭಕ್ತನೂ ಆದ ಈ ದೊರೆ ಆಳುತ್ತಿರುವಾಗಲೇ ಪದ್ಮರಸರ ಬಾಯಿಂದ ಈ ಮಾತು ಬಂದಿರಲಿಕ್ಕೆ ಸಾಕು. ಪದ್ಮರಸರ ಜೀವನದ ಕೊನೆಕೊನೆಗೆ ಈ ಘಟನೆ ನಡೆದಂತೆ ಊಹಿಸಬಹುದಾದುದರಿಂದ ಮೇಲಿನ ನಿರ್ಣಯಕ್ಕೆ ಈ ಮಾತು ಪುಷ್ಟಿ ಕೊಡುವಂತಿದೆ.

ಈ ಆಧಾರಗಳ ಬಲದಿಂದ ಹರಿಹರ, ರಾಘವಾಂಕ, ಕೆರೆಯ ಪದ್ಮರಸರು ದೀರ್ಘಾಯುಷ್ಯವನ್ನು ಪಡೆದು ಹದಿಮೂರನೆಯ ಶತಮಾನದ ಮುಕ್ಕಾಲು ಭಾಗವನ್ನು ಸಹಜವಾಗಿಯೇ ವ್ಯಾಪಿಸಿರುವರೆಂದು ಹೇಳಬಹುದು.

## ಜೀವನ ಚರಿತ್ರೆ

ಹರಿಹರದೇವನ ಜೀವನ ಚರಿತ್ರೆ ಅವನ ಕೃತಿಗಳಲ್ಲಿ ವಿಸ್ತಾರವಾಗಿ ದೊರೆಯುವುದಿಲ್ಲವಾದರೂ ರಾಘವಾಂಕಚಾರಿತ್ರ, ಚನ್ನಬಸವಪುರಾಣ, ಪದ್ಮರಾಜಪುರಾಣ ಮುಂತಾದ ಕೃತಿಗಳಲ್ಲಿ ದೊರೆಯುವ ಉಲ್ಲೇಖಗಳಿಂದ ಅವನ ಜೀವನ ಚರಿತ್ರೆಯನ್ನು ಸ್ಥೂಲವಾಗಿ ತಿಳಿದುಕೊಳ್ಳಬಹುದು.

ಹಂಪೆಯ ಶರ್ವಾಣಿ ಮತ್ತು ಮಹಾದೇವರೆಂಬ ದಂಪತಿಗಳು ಹರಿಹರನ ತಂದೆ ತಾಯಿಗಳು[೩]. ಹರಿಹರನ ತಂದೆತಾಯಿಗಳು ಉಜ್ವಲ ಶಿವಭಕ್ತರೂ ಶಿವಾಭಿಮಾನಿಗಳೂ ಆಗಿದ್ದರು. ಹರಿಹರನಲ್ಲಿ ತಂದೆತಾಯಿಗಳ ಈ ಶಿವಭಕ್ತಿ ಬಾಲ್ಯದಲ್ಲಿಯೇ ತಲೆದೋರಿತು. ಹರಿಹರನ ಗುರು ಶೈವಸಾರೋದಯನಾದ ಹಂಪೆಯ ಮಾಯಿದೇವ.

---

[೧] ಪ. ಪು.ಸಂ. ೧೩, ಪ. ೭. [೨] ಪ.ಪು. ಸಂ. ೧೩, ಪ.೯. [೩] ರಾ. ಚಾ. ಸಂ ೧೪, ಪ.೪೬.

ತಾನು ಮಾಯಿದೇವನ ಶಿಷ್ಯನೆಂಬ ಸಂಗತಿಯನ್ನು ಅತ್ಯಂತ ಅಭಿಮಾನದಿಂದ ಹೇಳಿಕೊಂಡಿದ್ದಾನೆ. ಈ ಗುರುವಿನ 'ಹತ್ತಿರ ವಿದ್ಯಾಭ್ಯಾಸ ಮಾಡಿದ ಹರಿಹರದೇವನು ವೇದವೇದಾಂಗ ಪುರಾಣೇತಿಹಾಸ ಕಾವ್ಯ ನಾಟಕ ಅಲಂಕಾರ ವ್ಯಾಕರಣ ಮುಂತಾದ ವಿಷಯಗಳಲ್ಲಿ ಅತಿಶಯವಾದ ಪ್ರಾವೀಣ್ಯವನ್ನು ಪಡೆದನು. ಗಿರಿಜಾಕಲ್ಯಾಣ ಮಹಾಪ್ರಬಂಧವು ಅವನ ಪಾಂಡಿತ್ಯಕ್ಕೆ ನಿಕಷವನ್ನೊದಗಿಸುತ್ತದೆ.

ಹರಿಹರನಿಗೆ ಒಬ್ಬ ಸೋದರಿಯಿದ್ದಳೆಂದೂ ಅವಳೇ ಮಹಾಕವಿ ರಾಘವಾಂಕನ ತಾಯಿಯೆಂದೂ ತಿಳಿದುಬರುತ್ತದೆ.[೧] ರಾಘವಾಂಕಚಾರಿತ್ರದಲ್ಲಿ ಹರಿಹರನ ಸೋದರಳಿಯನಾದ ರಾಘವಾಂಕನ ತಾಯಿಯ ಹೆಸರು ರುದ್ರಾಣಿಯೆಂದು ಹೇಳಿರುವುದರಿಂದ ಅವಳೇ ಇವನ ಸೋದರಿಯಾಗಿದ್ದಳೆಂದು ಊಹಿಸಲವಕಾಶವಿದೆ.[೨]

ಹರಿಹರದೇವನು ಹೊಯ್ಸಳ ನರಸಿಂಹ ಬಲ್ಲಾಳನಲ್ಲಿ ಕರಣಿಕಾಗ್ರಣಿಯಾಗಿದ್ದನು.[೩] ಪಂಪಾವಿರೂಪಾಕ್ಷನ ನಿಸ್ಸೀಮ ಭಕ್ತನಾದ ಈತನು 'ಪರಸೇವೆ ಹೇಸ'ವೆಂದು ಬಗೆದು ಕರಣಿಕವೃತ್ತಿಯನ್ನು ತ್ಯಾಗಮಾಡಿ ಹಂಪೆಯತ್ತ ಧಾವಿಸುವನು.[೪] ಹಂಪೆಯಲ್ಲಿ 'ತನಗೆ ವಿರೂಪಾಕ್ಷನೊರೆದಂತೆ ಗಣಸಂತತಿಯ ಕಥೆಗಳಂ ರಘಟಾಬಂಧಂಗಳಿಂ ರಚಿಸು' ಎಂಬ ಶಿವನಾಜ್ಞೆಯನ್ನು ಅನುಸರಿಸಿ ಆ ಕಾರ್ಯದಲ್ಲಿ ನಿರತನಾಗುವನು.[೫] ಆಂಧ್ರ ದೇಶದ ಗಣಿಕಾಗ್ರಣಿ ಮಾದೇವಿಯೆಂಬವಳು ಹರಿಹರನ ಕೀರ್ತಿಮಹಿಮೆಗಳಿಗೆ ಮರುಳಾಗಿ ಕಾಮಲಂಪಟೆಯಾಗಿ ಹಂಪೆಗೈತಂದು ಅವನ ದಿವ್ಯ ವ್ಯಕ್ತಿತ್ವವನ್ನು ಕಂಡು ವೈರಾಗ್ಯ ತಾಳುವಳು.[೬] ಹರಿಹರನ ಜಿತೇಂದ್ರಿಯತ್ವವನ್ನು ರೂಪಿಸುವ ಸಾಂಕೇತಿಕ ಕಥೆಯಿದು.

ಹರಿಹರದೇವನ ಜೀವನಚರಿತ್ರೆಯನ್ನು ಪ್ರಮುಖ ವಿಷಯವನ್ನಾಗಿ ಇಟ್ಟುಕೊಂಡು ರಚಿತವಾದ 'ರಾಘವಾಂಕನ ಹರಿಹರಮಹತ್ವ' ಎಂಬ ಕೃತಿ ಉಪಲಬ್ಧವಾಗಿಲ್ಲ. ಅದು ದೊರೆತರೆ ಹರಿಹರನ ಜೀವನಚರಿತ್ರೆಯ ಇನ್ನೂ ಕೆಲವು ವಿಶೇಷಾಂಶಗಳು ಕೈವಶವಾಗಬಹುದು.

---

೧ರಾ.ಚಾ.ಸಂ. ೨, ಪ.೨೩; ಚ.ಬ.ಪು.ಸಂ. ೬೨, ಪ. ೫೬. ೨ರಾ.ಚಾ.ಸಂ. ೨, ಪ. ೨೩. ೩ರಾ.ಚಾ.ಸಂ. ೧೪, ಪ. ೪೭; ಪ.ಪು.ಸಂ. ೪, ಪ. ೨೩; ಪ.ಪು.ಸಂ. ೫, ಪ.೬. ೪ಪ.ಪು.ಸಂ. ೫, ಪ. ೨೦–೨೧. ೫ರಾ.ಚಾ.ಸಂ. ೧೪, ಪ. ೯೪. ೬ರಾ.ಚಾ.ಸಂ. ೧೪, ಪ. ೬೭.

## ಗುರುಪರಂಪರೆ

ಹರಿಹರದೇವನು ಗಿರಿಜಾಕಲ್ಯಾಣದಲ್ಲಿ ತನ್ನ ಪರಂಪರೆಯನ್ನು ವಿಸ್ತಾರವಾಗಿ ವಿವರಿಸಿದ್ದಾನೆ.

"ಹಂಪೆಯ ಶಂಕರದೇವ ! ಆತನು ಸುರುಚಿರಮೂರ್ತಿ, ಸತ್ಯಮೂರ್ತಿ, ಪುಣ್ಯವಿಸ್ತಾರ ಗುರುಮೂರ್ತಿ, ಶಾಂತಿಮಯಮೂರ್ತಿ. ಸುಧಾಕರಮೂರ್ತಿ, ಉತ್ತರೋತ್ತರಮೂರ್ತಿ, ಸುಖಮೂರ್ತಿ, ಮನೋಹರಮೂರ್ತಿ, ಚಂದ್ರಶೇಖರ ಮೂರ್ತಿ, ಕೀರ್ತಿಪತಿ.[೧]"

ಶಂಕರದೇವರಿಂದ ಪಾಶಚ್ಛೇದವನ್ನು ಇಂಬುಗೊಂಡವನು ಮಾದಿರಾಜ[೨]. ಶಿಷ್ಯನಿಗೆ ದೀಕ್ಷೆಯನ್ನು ಕೊಡುವ ಪಾವನಾತ್ಮಕ ಗುರುವು ಆತನ ಮಲತ್ರಯಗಳನ್ನು ನಾಶಮಾಡುತ್ತಾನೆ. ಬದ್ಧಜೀವಿಯನ್ನು ಮುಕ್ತಜೀವಿಯನ್ನಾಗಿ ಮಾಡುತ್ತಾನೆ. ಅಂತೆಯೇ ಆತನು ಶಿಷ್ಯನ ಪಾಶಚ್ಛೇದವನ್ನು ಮಾಡುತ್ತಾನೆಂದು ಹೇಳುತ್ತಾರೆ. ಬದ್ಧಜೀವಿ ಪಶು; ಈ ಸಂಸಾರ ಪಾಶ; ಈ ಪಾಶಕ್ಕೊಳಪಟ್ಟು ನಡೆದುದರಿಂದಲೇ ಆತನು ಬದ್ಧನು. ಸದ್ಗುರುವು ದೀಕ್ಷೆಯನ್ನು ಕೊಡುವಲ್ಲಿ ಆತನ ಪಾಶಚ್ಛೇದವನ್ನು ಮಾಡುತ್ತಾನೆ. ಆದುದರಿಂದ ಹಂಪೆಯ ಮಾದಿರಾಜನು ಹಂಪೆಯ ಶಂಕರದೇವರ 'ಕರಕಮಲಸಂಜಾತ'ನೆಂದು ಇಟ್ಟುಕೊಳ್ಳಬೇಕಾಗುತ್ತದೆ ರಾಘವಾಂಕನು ಗುರು ಪರಂಪರೆಯನ್ನು ಹೇಳುವಾಗ ಶಂಕರದೇವ ಮಾದಿರಾಜರಿಗಿದ್ದ ಈ ಸಂಬಂಧವನ್ನು ಸ್ಪಷ್ಟವಾಗಿ ಹೇಳಿಲ್ಲ.

ಮಾದಿರಾಜನ ಮನೋದುಗ್ಧಾಬ್ಧಿ ಚಂದ್ರನೆನಿಸಿದವನು ಶೈವಸಾರೋದಯನಾದ ಹಂಪೆಯ ಮಾಯಿದೇವನು[೩]. ಈತನು "ಶಾಶ್ವತಮೂರ್ತಿ, ಶೈವಸುಭಗನು, ಸಾಕಾರ ಸರ್ವೇಶ್ವರನು, ಸಂತೋಷಾಭರಣನು, ಪ್ರಸನ್ನಕರುಣನು, ಪ್ರತ್ಯಕ್ಷಪಂಚಾನನನು". ಈ ಮಾಯಿದೇವನೇ ಹರಿಹರನ ಗುರುವು. ಹರಿಹರನು ಈ ಗುರುವಿನ ಮಹಿಮೆಯನ್ನು ಭಕ್ತಿತುಂದಿಲನಾಗಿ ವರ್ಣಿಸಿದ್ದಾನೆ. 'ಮಾಯಿದೇವನ ಕರುಣಂಬಡೆದು ನಾನು ಕವಿಕಳಾ ವಿಶಾರದನಾಗಿ ಮೆರೆಯುತ್ತೇನೆ'ಯೆಂದು ಅತ್ಯಂತ ಅಭಿಮಾನದಿಂದ ಅವನು ಹೇಳಿಕೊಂಡಿದ್ದಾನೆ.

---

೧ಗಿರಿಜಾಕಲ್ಯಾಣ ಸಂ.ಪ. ೩೬. ೨ಗಿರಿಜಾಕಲ್ಯಾಣ ಸಂ. ೨, ಪ. ೧೩೨. ೩ಗಿರಿಜಾ ಕಲ್ಯಾಣ ಸಂ. ೧, ಪು. ೩೮.

ಹಂಪೆಯ ಶಂಕರದೇವರ
ಹಂಪೆಯ ಗುರು ಮಾದಿರಾಜದೇವರ ಮತ್ತಾ
ಹಂಪೆಯ ಮಾಪರಸರ ದಯೆ
ಯಿಂ ಪೇಳ್ದಂ ರಸಿಕಚಕ್ರಿ ಹರಿಹರದೇವಂ ||

## ಕೃತಿಗಳು

ಗಿರಿಜಾಕಲ್ಯಾಣ, ಪಂಪಾಶತಕ, ರಕ್ಷಾಶತಕ, ಮುಡಿಗೆಯ ಅಷ್ಟಕ, ಶಿವಗಣದ ರಗಳೆಗಳು ಇದು ಹರಿಹರ ವಿರಚಿತ ಕಾವ್ಯರಾಶಿ. ಶಿವಗಣದ ರಗಳೆಗಳಲ್ಲಿ ಪುರಾತನರ ರಗಳೆಗಳು, ನೂತನರ ರಗಳೆಗಳು ಹಾಗೂ ಇತರ ರಗಳೆಗಳು ಎಂದು ಅಭ್ಯಾಸದ ಅನುಕೂಲತೆಗಾಗಿ ವಿಭಾಗಗಳನ್ನು ಕಲ್ಪಿಸಿಕೊಳ್ಳಬಹುದು. ಪುರಾತನರ ರಗಳೆಗಳಲ್ಲಿ ತಮಿಳುನಾಡಿನ ಅರುವತ್ತು ಮೂವರು ಶೈವಭಕ್ತರ ಚರಿತ್ರಗಳನ್ನು ಹೇಳಿದ್ದಾನೆ. ನೂತನಪುರಾತನರ ರಗಳೆಗಳು ಎಷ್ಟು ಎಂಬುದು ಇನ್ನೂ ನಿರ್ಧಾರವಾಗಿ ತಿಳಿದು ಬಂದಿಲ್ಲ. ಒಟ್ಟಿನಲ್ಲಿ ೧೦೫ ರಗಳೆಗಳ ಅಪೂರ್ವಸಾಹಿತ್ಯರಾಶಿಯನ್ನು ಕನ್ನಡಕ್ಕಿತ್ತು ಅಪ್ರತಿಮ ಮಹಾಕವಿಯಾಗಿ ಮೆರೆದಿದ್ದಾನೆಯೆಂಬುದು ಸತ್ಯಸಂಗತಿ

ಮಹಾಕವಿ ಹರಿಹರದೇವನ ಅಪಾರವಾದ ಈ ಸಾಹಿತ್ಯಸಾಗರದಲ್ಲಿ ಆಣಿಮುತ್ತುಗಳಂತಿದ್ದ ಪುರಾತನರ ಆರು ರಗಳೆಗಳನ್ನು ಇಲ್ಲಿ ಆಯ್ದುಕೊಳ್ಳಲಾಗಿದೆ.

## ತ್ರಿಷಷ್ಟಿ ಪುರಾತನರು

ಅರವತ್ತುಮೂವರು ಪುರಾತನರು ತಮಿಳುನಾಡಿನಲ್ಲಿ ಆಗಿಹೋದ ಶಿವಭಕ್ತರು. ಇವರು ಚೋಳ, ಚೇರ, ಪಾಂಡ್ಯದೊರೆಗಳ ಕಾಲದಲ್ಲಿ ಜೀವಿಸಿದ್ದರು. ಶೈವಮತವು ತಮಿಳು ನಾಡಿನಲ್ಲಿ ಬಾಳಿ ಬೆಳಗಲು ಕಾರಣರಾದ ಮಹಾನುಭಾವರಿವರು.

ಅರುವತ್ತುಮೂವರು ಪುರಾತನರನ್ನು ಕುರಿತು ಪೆರಿಯ ಪುರಾಣವೆಂಬ ಉದ್ಗ್ರಂಥ ತಮಿಳಿನಲ್ಲಿ ರಚಿತವಾಗಿದೆ. ಅದರ ಕರ್ತೃ ಶೇಕ್ಕಿಳಾರ್ ಮಹಾಕವಿ. ಈ ಕವಿ ೧೧ನೆಯ ಶತಮಾನದ ಕೊನೆ ಇಲ್ಲವೆ ೧೨ನೆಯ ಶತಮಾನದ ಆದಿಯಲ್ಲಿ ಜೀವಿಸಿದ್ದನಾದ್ದರಿಂದ ತತ್ಪೂರ್ವದಲ್ಲಿಯೇ ಅರವತ್ತುಮೂವರು ಪುರಾತನರು ಜೀವಿಸಿರಲು ಸಾಕು. ಪೆರಿಯ ಪುರಾಣಕ್ಕಿಂತಲೂ ಮೊದಲು ಅರವತ್ತು ಮೂವರು ಪುರಾತನರ ಚರಿತ್ರೆಗಳನ್ನು ಹೇಳುವ "ತಿರುಅಂಡಾದಿ" ಮತ್ತು "ತಿರುತ್ತೊಂಡತ್ತೊಗೈ" ಎಂಬ ಗ್ರಂಥಗಳು ಹುಟ್ಟಿದ್ದವು. ವಿವಿಧ ಆಧಾರಗಳಿಂದ ಈ ಅರವತ್ತುಮೂವರು

ಪುರಾತನರು ಕ್ರಿ.ಶ. ೫ನೆಯ ಶತಮಾನದಿಂದ ೯ನೆಯ ಶತಮಾನದ ವರೆಗಣ ಅವಧಿಯಲ್ಲಿ ಬಾಳಿ ಬೆಳಗಿದರೆಂದು ವಿದಿತವಾಗುತ್ತದೆ.

ಅರವತ್ತುಮೂವರು ಪುರಾತನರಲ್ಲಿ ಸಂಗಮಸಾಹಿತ್ಯದಲ್ಲಿ ಉಲ್ಲಿಖಿತರಾದ ಕೋಚ್ಚಂಗಣಾರರು ಪ್ರಥಮರು. ಮತ್ತು ಕ್ರಿ.ಶ. ೮೪೦–೮೬೫ರ ಅವಧಿಯಲ್ಲಿ ಜೀವಿಸಿರಬಹುದಾದ ಸುಂದರಮೂರ್ತಿಗಳು ಕೊನೆಯವರು. ಇವರಲ್ಲದೆ ಅಪ್ಪರ್, ಸಂಬಂಧರ್, ಬೇಡರ ಕಣ್ಣಪ್ಪ, ನಂಬಿಯಣ್ಣ, ತಿರುನೀಲಕಂಠ ಮುಂತಾದವರು ಪ್ರಸಿದ್ಧರಾಗಿ ಹೋಗಿದ್ದಾರೆ.

ಅರುವತ್ತು ಮೂವರು ಪುರಾತನರ ಬಾಳು ಹಲವಾರು ರೀತಿಯಿಂದ ವೈಶಿಷ್ಟ್ಯಪೂರ್ಣವಾದುದು. ಇವರಲ್ಲಿ ಮೇಲುಕೀಳೆಂಬ ವೃತ್ತಿಭೇದವಿರಲಿಲ್ಲ. ಅರಸನಿಂದ ಹಿಡಿದು ಒಕ್ಕಲಿಗ, ಮೀನುಗಾರ, ಹೊಲೆಯ ಮುಂತಾದ ನಾನಾವೃತ್ತಿಯಿಂದ ಉಪಜೀವನ ನಡೆಸುವ ಜನ ಅಲ್ಲಿದ್ದರು. ಸ್ತ್ರೀಪುರುಷರೆಂಬ ಭೇದವಿರಲಿಲ್ಲ. ಇವರು ಯಾವ ಮತಸಂಘಗಳನ್ನು ಕಟ್ಟಿಕೊಂಡು ತಿರುಗಿದವರೂ ಅಲ್ಲ. ತಮಗೆ ತೋರಿದ, ತಾವು ಅನುಭವಿಸಿದ ಭಕ್ತಿಯ ರಸವನ್ನು ಹಾಡುಗಳ ರೂಪದಲ್ಲಿಯೋ ಪ್ರವಚನಗಳ ರೂಪದಲ್ಲಿಯೋ ಹೇಳುತ್ತ, ದೇಶದಾದ್ಯಂತ ಶಿವನ ಮಹಿಮೆಯನ್ನು ಸಾರುವುದು ಇವರ ಧರ್ಮ. ಇವರ ಈ ಕಾರ್ಯದ ಮೂಲಕವಾಗಿಯೇ ಶೈವಧರ್ಮವು ಜೈನ ಬೌದ್ಧ ಧರ್ಮಗಳನ್ನು ಹಿಂದೆ ಹಾಕಿ ಮುನ್ನಡೆಯಿತು. ಈ ರೀತಿ ಅರವತ್ತು ಮೂವರು ಪುರಾತನರು ಶೈವಧರ್ಮದ ಪುನರುತ್ಥಾನಕ್ಕೆ ಮುಖ್ಯ ಪ್ರೇರಕ ಶಕ್ತಿಯಾದರು. ಭಕ್ತಿಯ ಪರಾಕಾಷ್ಠೆಯೇ ಇವರ ಜೀವನದ ಒಳಉಸಿರು. ಇದೆಲ್ಲವನ್ನು ಮುಂದೆ ಕನ್ನಡದಲ್ಲಿ ಮಹಾಕ್ರಾಂತಿಯೆಸಗಿದ ಶಿವಶರಣರಲ್ಲಿ ಕಾಣುತ್ತೇವೆ. ಅಂತೆಯೇ ಇವರು ಅವರಿಗೆ ಪುರಾತನರಾಗಿದ್ದಾರೆ.

ಇವರ ಪ್ರಭಾವ ವಚನಕಾರರ ಮೇಲಾದದ್ದು ಸ್ಪಷ್ಟವಿದೆ. ದೇವರ ದಾಸಿಮಯ್ಯನಿಂದ ಬಸವಣ್ಣನವರೆಗೆ ವಚನಕಾರರು ಅವರನ್ನು ಸ್ಮರಿಸುತ್ತಾರೆ. ಹರಿಹರನಂತೂ ಈ ಅರವತ್ತುಮೂವರು ಪುರಾತನರ ಮೇಲೆ ರಗಳೆಗಳನ್ನು ಬರೆದನು. ನಂಬಿಯಣ್ಣನ ರಗಳೆ, ಕಣ್ಣಪ್ಪನ ರಗಳೆ ಮುಂತಾದುವು ಕನ್ನಡ ಸಾಹಿತ್ಯದಲ್ಲಿ ಅಚ್ಚಳಿಯದ ಸ್ಥಾನ ಪಡೆದಿವೆ. ಆ ಮೇಲೆ ಭೀಮಕವಿ, ಗುಬ್ಬಿಯ ಮಲ್ಲಣಾರ್ಯ, ಲಕ್ಕಣ್ಣ ದಂಡೇಶ, ನಿಜಗುಣಶಿವಯೋಗಿ, ಸುರಂಗ, ಲಿಂಗರಾಜ. ಶಿವಲಿಂಗದೇಶಿಕ ಮೊದಲಾದವರು ಇವರ ಮೇಲೆ ಕೃತಿಗಳನ್ನು ರಚಿಸಿದ್ದಾರೆ. ಸುರಂಗನ "ತ್ರಿಷಷ್ಟಿ ಪುರಾತನರ ಚಾರಿತ್ರ" ಒಂದು ಬೃಹದ್ಗ್ರಂಥವಾಗಿದೆ.

ಅರುವತ್ತುಮೂವರು ಪುರಾತನರ ಜೀವನದ ಸಾರಸರ್ವಸ್ವವೆಂದರೆ ಶಿವಭಕ್ತಿಯ ರೂಪದಲ್ಲಿ ಪ್ರಕಟವಾದ ವಿಶ್ವಧರ್ಮ. ಮೋಕ್ಷಸಾಧನೆಗೆ ಶಿವಧ್ಯಾನ (ಯೋಗ) ವಷ್ಟೇ ಸಾಲದು; ಧ್ಯಾನದ ಜೊತೆಗೆ ನಿತ್ಯ ಶಿವಪೂಜೆ ನಡೆಯಬೇಕು. ಆದರೂ ಅವರು ಬಾಹ್ಯಆಚಾರಗಳಿಗೆ ಮಹತ್ವ ಕೊಡದೆ ಅಂತರಂಗದ ನೈಜಭಕ್ತಿಗೆ ವಿಶೇಷ ಮಹತ್ವ ಕೊಟ್ಟರು. ಅವರ ಪ್ರಕಾರ ಶಿವಭಕ್ತರಿಗೆ ಎಲ್ಲೆಲ್ಲಿಯೂ ಶಿವದರ್ಶನ; ಮಾನವ ಜೀವನದ ಸುಖಶಾಂತಿಯೇ ಅವರ ಗುರಿ; ವಿಶ್ವಪ್ರೇಮವೇ ಅವರ ಸಂದೇಶ; ಸೇವೆ ಅವರ ಪರಮ ಅಸ್ತ್ರ. ಅವರು ನುಡಿದಂತೆ ನಡೆದು ಸದಾಶಿವಧ್ಯಾನದಲ್ಲಿ ನಿರತರಾದರು, ಲೋಕವಂದ್ಯರಾದರು.

## ಕಥಾಸಾರ

### ತಿರುನೀಲಕಂಠರ ಕಥೆ

ಸುಕೃತ–ಜೀವರೂ ಅಪ್ರತಿಮ ಪ್ರಭಾವಯುತರೂ ಆದ ಅರವತ್ತುಮೂವರು ಪುರಾತನರಲ್ಲಿ 'ಮೊದಲ ಮಹೇಶ್ವರ' ತಿರುನೀಲಕಂಠರು.

ಚೋಳ ದೇಶದ ಪೊನ್ನಾಂಬಲದ ಶಿವಭಕ್ತ ತಿರುನೀಲಕಂಠ. ಮುತ್ತೈದೆ ಅವರ ಹೆಂಡತಿ. ಇವರಿಬ್ಬರಿಗೂ ಹದಿನಾರರ ಹರಯ. ನಿತ್ಯಲಿಂಗಾರ್ಚನೆ ಅವರ ಉಸಿರು. ನಿತ್ಯವೂ ಶಿವದೇವಾಲಯಕ್ಕೆ ಹೋಗಿ ಸಾನಂದದಿಂದ ಪೂಜಿಸುವುದು ತಿರುನೀಲಕಂಠರ ವಾಡಿಕೆ. ಒಂದು ದಿನ ದೇವಾಲಯದಿಂದ ತಿರುಗಿಬರುವಾಗ ಓರ್ವ ವಿಳಾಸಿನಿಯು ಉಪ್ಪರಿಗೆಯ ಮೇಲಿನಿಂದ ಚೆಲ್ಲಿದ "ಪರಿಯಾಣದುದಕ" ಅವರ ಮೇಲೆ ಬಿದ್ದಿತು. ಅದು ತಿರುನೀಲಕಂಠರ ಮೇಲೆ ಬಿದ್ದಿತೆಂಬುದು ತಿಳಿದು, ಅವಳು ಗಡಗಡ ನಡುಗಿ, ಭಕ್ತಿಯಿಂದ ಅವರನ್ನು ಕರೆದುಕೊಂಡು ಹೋಗಿ ಪರಿಮಳೋದಕದಿಂದ ಸ್ನಾನಮಾಡಿಸಿ ದಿವ್ಯಗಂಧಂಗಳಿಂದನುಲೇಪನ ಮಾಡಿ ಕಳುಹಿಸುತ್ತಾಳೆ.

ತಿರುನೀಲಕಂಠರು ತಿರುಗಿ ಮನೆಗೆ ಬಂದರೆ, ಮನೆಯೊಳಗೆಲ್ಲ ಪೊಸಗಂಪು ಕವಿಯುತ್ತದೆ. ಮುತ್ತೈದೆ ಮನದೊಳಗೆ ಏನೋ ಶಂಕಿಸಿ, ಯಾಂತ್ರಿಕವಾಗಿ ಮನೆಗೆಲಸಗಳನ್ನು ಮುಗಿಸುತ್ತಾಳೆ. ರಾತ್ರಿ ಶಯನಕ್ಕೆ ಅಣಿಯಾದಾಗ ತಿರುನೀಲಕಂಠರು ರತಿಯರ್ಥದಿಂದ ಅವಳಲ್ಲಾಡಿಸಲು ಸಂಶಯಚಿತ್ತಳಾದ ಆ ಸತಿ "ಮುಟ್ಟಿದಡೆ ಶಿವನಾಣೆ" ಎಂದು ಆಣೆಯಿಡುತ್ತಾಳೆ ಶಿವನಾಣೆಯನ್ನು ಕೇಳಿ ಅವರ ಮುಂದಾದ ಕೈ ತಂತಾನೆ ಹಿಂದೆ ಸರಿಯುತ್ತದೆ. ಆ ದಿನ ಮೊದಲಾಗಿ ಇಬ್ಬರೂ ಒಬ್ಬರನ್ನೊಬ್ಬರು ಸ್ಪರ್ಶಿಸಲಿಲ್ಲ. ಈ "ಆಣೆಯಿಬ್ಬರ ದೇಹದೊಳು ಹೊಕ್ಕು ಬೆಳೆಯುತ್ತದೆ.

ಗುಪ್ತಭಕ್ತ ದಂಪತಿಗಳ ಆಣೆಯೊಳಡಗಿತ್ತು ಅವರ ಯೌವನ ನೋಡೆ." ಅವರ ಇರವೇ ಜಪತಪವೆರಸಿ ಲೋಕಕ್ಕೆಲ್ಲ ಆದರ್ಶವಾಗಿತ್ತು.

ಕ್ರಮೇಣ 'ಆಣೆ ಪಕ್ವಕ್ಕೆ ಬಂದಂತೆ ಬಂದುದು ಮುಪ್ಪು' ಆಗ ಶಿವನು ಈ ಗುಪ್ತಭಕ್ತರ ಭಕ್ತಿಯನ್ನು ಲೋಕಕ್ಕೆಲ್ಲಾ ಸಾರಬೇಕೆಂದು ವೃದ್ಧತಾಪಸಿಯ ವೇಷವನ್ನು ತೊಟ್ಟು, ಅವರಲ್ಲಿಗೆ ಬರುತ್ತಾನೆ. ನಾಳೆ ಬಂದು ಒಯ್ಯುತ್ತೇನೆಂದು ಒಂದು ಪಾತ್ರೆಯನ್ನು ಅವರಲ್ಲಿ ಇಟ್ಟು ಹೋಗುತ್ತಾನೆ. ಮರುದಿನ ಬಂದು ತನ್ನ ಪಾತ್ರೆಯನ್ನು ಬೇಡುತ್ತಾನೆ. ಪಾತ್ರೆ ಇಲ್ಲ. ಎಲ್ಲ ತನ್ನದೇ ಜಾಲ. ನ್ಯಾಯ ಪುರಪ್ರಮುಖರಲ್ಲಿಗೆ ಹೋಗುತ್ತದೆ. ಪಾತ್ರೆ ಇಟ್ಟದ್ದು ಸರಿ, ಆದರೆ ಅದು ತಮ್ಮ ಬಳಿಯಲ್ಲಿ ಇಲ್ಲ, ಎಂದು ತಿರುನೀಲಕಂಠರು ಒಪ್ಪಿಕೊಳ್ಳುತ್ತಾರೆ. ಅದಕ್ಕೆ ಬದಲು ಪುರಜನರು ಸಾವಿರ ಹೊನ್ನ ಕೊಡುತ್ತೇವೆಂದರೆ ಆತ ಒಪ್ಪುವದಿಲ್ಲ. "ತಿರುನೀಲಕಂಠರು ತಮ್ಮ ಹೆಂಡತಿಯ ಕೈಹಿಡಿದು ಕೊಳದೊಳಗೆ ಮುಳುಗೆದ್ದರೆ ನಾನು ಪಾತ್ರೆಯನ್ನು ಬೇಡಲಾರೆ" ಎಂದು ಕರಾರು ಹಾಕುತ್ತಾನೆ. ಆದರೆ ಅದಕ್ಕೆ ಆ ದಂಪತಿಗಳ ಸಮ್ಮತಿ ಇಲ್ಲ. ಏಕೆಂದರೆ ಹಿಡಿದ ವ್ರತವನ್ನು ಹೇಳಿದರೆ, ಅದು ಡಂಭಾಚಾರವಾಗುತ್ತದೆ.

ಕೊನೆಗೆ ಶಿವನು "ಶರಣ (ಕರದ?) ಕೋಲಿನ ಒಂದು ತುದಿಯನ್ನು ತಿರುನೀಲಕಂಠರು, ಇನ್ನೊಂದು ತುದಿಯನ್ನು ಅವರ ಹೆಂಡತಿ ಹಿಡಿದು ಕೊಳದಲ್ಲಿ ಮುಳುಗಲಿ" ಎನ್ನುತ್ತಾನೆ. ಅದಕ್ಕೆ ಇಬ್ಬರೂ ಒಪ್ಪಿ, "ತನುವಿಡಿದ ಜರೆಯನ್ನು ತೊಳೆದು ಕಳೆವಂತೆ" ಮುಳುಗಿ ಮೇಲೇಳಲು ಮೊದಲಿನಂತೆಯೇ ಹದಿನಾರರ ಹರಯದವರಾಗುತ್ತಾರೆ. ಈ ಪರಿಯ ಭಕ್ತಿಗೆ 'ನ ಭೂತೋ ನ ಭವಿಷ್ಯತಿ' ಎನ್ನುವಂತೆ ಜಗವೆಲ್ಲ ಬೆರಗಾಗಿರಲು ಮತ್ತೆ ಭಕ್ತಿಯ ಬಾಳು ಬಾಳಿ ಗಣಪದವಿಯನ್ನು ಪಡೆಯುತ್ತಾರೆ.

ಗುಪ್ತಭಕ್ತಿಯ ಮಹಿಮೆಯನ್ನು ಪ್ರಕಟಿಸುವ ಕಥೆ ಇದು.

## ಇಹೇಪಗೆಯಾಂಡರ ಕಥೆ

ಚೋಳ ದೇಶದ ಕಾವೇರಿಕರೆ ಪಟ್ಟಣಾಧಿಪತಿಯಾದ ಇಹೇಪಗೆಯಾಂಡ ಬೇಡಿದುದನಿಲ್ಲೆನ್ನದ ದಾನಿ. ಅವನಿಗೆ ನೂರಾರು ಸತಿಯರು ಅವರಲ್ಲೊಬ್ಬಳು 'ಪತಿಹಿತವೆ' ಎಂಬ ನಾಮಸಾರ್ಥಕ್ಯವುಳ್ಳ ಸತಿ ಅವನ ಪತ್ನಿ. ಅವಳು ಅವನ ನೆನೆವ ಮನ, ಈವ ಕೈ. 'ನುಡಿದುದಂ ನೆನೆದುದಂ ನೆನೆಯುವುದಂ' ಕೊಡುವ ಭಕ್ತ ಇಹೇಪಗೆಯಾಂಡ.

ಈ ರೀತಿ ಭಕ್ತಿದಾಸಕ್ರಿಯೆಯಲ್ಲಿ ಅರವತ್ತು ವರುಷ ಕಳೆಯಲು ಇವನ ಇಲ್ಲೆನ್ನದ ಅಗ್ಗಳಿಕೆಯನ್ನು ಪರೀಕ್ಷಿಸಬೇಕೆಂದು ಶಿವನು ಹುಸಿವೇಷದಿಂದ ಆ ಪುರಕ್ಕೆ ಬರುತ್ತಾನೆ. "ಬೆಳುದಿಂಗಳಿಂದೆ ಮಾಡಿದ ಮೂರ್ತಿ"ಯಂತಿರುವ ಆ ಪೂಜಗಡ ಜವ್ವನಿಗನನ್ನು ನೋಡಲು ಪುರಜನವೇ ವ್ಯೈಮರೆದು ನೆರೆಯುತ್ತದೆ ಆತನು ನೇರವಾಗಿ ಇಹಃಪಗೆಯಾಂಡನ ಅರಮನೆಗೆ ಬರುತ್ತಾನೆ ಇಹಃಪಗೆಯಾಂಡನು ಸಕಲಾದರಗಳನ್ನು ಮಾಡುತ್ತಾನೆ. "ಬೇಡಿದುದನ್ನು ನೀವು ಕೊಡುವಿರೆಂದು ಕೇಳಿ ಬಂದಿದ್ದೇನೆ. ನಮ್ಮ ಶಿವಾರ್ಚನೆಗೆ 'ಪತಿಹಿತವೆ'ಯಾದ ಓರ್ವಸತಿಯನ್ನು ಕೊಡಬೇಕೆ"ನ್ನುತ್ತಾನೆ. ಆಗ ಇಹಃಪಗೆಯಾಂಡನು ಪತಿಹಿತವೆ ಹೊರತು ತನ್ನ ಎಲ್ಲ ಸತಿಯರನ್ನು ಕರೆಯಿಸಿ ಯಾರನ್ನಾದರೂ ಆಯ್ದುಕೊಳ್ಳಬಹುದೆನ್ನುತ್ತಾನೆ. ಆ ತಪಸ್ವಿಗೆ ಒಬ್ಬರೂ ಒಪ್ಪಿಗೆಯಾಗುವುದಿಲ್ಲ. ಕೊನೆಗೆ ಇಹಃಪಗೆಯಾಂಡನು ತನ್ನ ಪತ್ನಿ "ಪತಿಹಿತವೆ"ಯನ್ನೇ ಕರೆಯಿಸುತ್ತಾನೆ. ಕೂಡಲೆ ಆತ ಒಪ್ಪಿ ಅವಳನ್ನು ಕರೆದುಕೊಂಡು ಹೋಗಲಣಿಯಾಗುತ್ತಾನೆ. ಇದನ್ನು ಕೇಳಿ ಇಹಃಪಗೆಯಾಂಡನ ಬಂಧುಬಳಗ ಸಹಿತ ಪುರಜನಬಲವೆಲ್ಲ ಉರಿದೇಳುತ್ತದೆ.

'ಇಂಥ ಮಹಾಸತಿಯನ್ನು ಯಾವನೋ ಒಬ್ಬ ತಪಸ್ವಿಗೆ ಒಪ್ಪಿಸುವುದು ಸಾಧ್ಯವಿಲ್ಲ. ಏನೇ ಹೋರಾಟವಾದರೂ ಸರಿ, ನಾವು ಇದಕ್ಕೆ ಒಪ್ಪಲಾರೆವು' ಎಂದು ಬಲವೆಲ್ಲ ಸನ್ನದ್ಧವಾಗುತ್ತದೆ. ಆಗ ತಪಸ್ವಿ 'ಒಂದು ಕೈಯಿಂದ ಕೊಟ್ಟು ಇನ್ನೊಂದು ಕೈಯಿಂದ ಕಸಿದುಕೊಳ್ಳುವ ಈ ರೀತಿ ಹೊಸದು' ಎಂದು ಇಹಃಪಗೆಯಾಂಡನನ್ನು ಮೂದಲಿಸುತ್ತಾನೆ. ಆಗ ಇಹಃಪಗೆಯಾಂಡನು ಸ್ವತಃ ಕಳುಹಿಸಲು ಬರುತ್ತಾನೆ. ಆತ ಏಕಾಕಿ. ಸಕಲ ಬಲವನ್ನು ಧ್ವಂಸಮಾಡಿ, ಶಿವನ ಮಾರ್ಗವನ್ನು ನಿರ್ವಿಘ್ನ ಮಾಡುತ್ತಾನೆ. ಶಿವನು ಮೆಚ್ಚಿ ಅವರಿಗೆ ತನ್ನ ನಿಜರೂಪ ತೋರಿಸಿ ಗಣಪದವಿಯನ್ನು ದಯಪಾಲಿಸುತ್ತಾನೆ.

ತನ್ನ ಅರ್ಧಾಂಗಿಯನ್ನೇ ದಾನ ನೀಡುವ ಮಹಾದಾನಿ ಶಿವಭಕ್ತನ ಕಥೆ ಇದು.

## ಇಳೆಯಾಂಡಗುಡಿಮಾರರ ಕಥೆ

ಚೋಳದೇಶದ ಇಳೆಯಾಂಡಗುಡಿಯೆಂಬಲ್ಲಿ ಇಳೆಯಾಂಡಗುಡಿಮಾರನೆಂಬ 'ಶಿವನ ಕಡಿಮಗ'ನಂತಿರ್ದ ಶಿವನ ಭಕ್ತನಿರುತ್ತಾನೆ. ಆತ ಒಕ್ಕಲಿಗ. 'ಬಿತ್ತಿಬೆಳೆವಂ ಶಿವನ ಸದ್ಭಕ್ತಿಪಸಿಗಳಂ'. ಶರಣ ಜನರಿಗೆ ಬೇಡಿದುದ ಕೊಡುವುದೇ ಅವನ ಕಾಯಕ. ಭಕ್ತಜನ ಬರುವುದೂ, ಆತ ಕೊಡುವುದೂ ಹೆಚ್ಚುತ್ತ ನಡೆಯುತ್ತದೆ. 'ಮೇರೆದಪ್ಪಿದ ವಾರ್ಧಿಯಂತೆ' ಶರಣಜನ ನೆರೆಯಲಾರಂಭಿಸುತ್ತದೆ. ಇದಕ್ಕಾಗಿ ಇಳೆಯಾಂಡ ಗುಡಿ

ಮಾರಿದರು ತಮ್ಮ ಭೂಮಿಯನ್ನೇ ಮಾರಿದರು; ತಮ್ಮ ತೋಟವನ್ನು ಮಾರಿದರು; ಆ ಮೇಲೆ ತಮ್ಮ ಮನೆಯ ಅರ್ಧಭಾಗವನ್ನು ಮಾರಿದರು ಆದರೂ ಕೊಡುವ ಉತ್ಸಾಹ ಕುಗ್ಗಲಿಲ್ಲ. ತನಗೆ ತನ್ನ ಹೆಂಡತಿಗೆ, ತನ್ನ ಬಾಲಮಗುವಿಗೆ ಸಾಲುವಷ್ಟು ಎಡೆ ಮಾತ್ರ ಉಳಿಯಿತು. ಆದರೂ ಅವನ ಮನೋನಿರ್ಧಾರ "ತನುವಿರ್ದಪ್ಪುದು ತನುವಿನೊಳಗರ್ಥವಿತ್ತಪೆಂ। ಮನವಿರ್ದಪ್ಪುದು ಮನದೊಳರ್ಥಮಂ ಕೊಟ್ಟಪೆಂ". ಈ ರೀತಿ ತೊಂಬತ್ತೈದು ವರ್ಷ ಗತಿಸಲು. ಈಶ್ವರನು ಈ ಶರಣನ ಕೊಡುಗೆಯನ್ನು ಪರೀಕ್ಷಿಸಿ ಪ್ರಕಟಿಸಬೇಕೆಂದು ಹುಸಿವೇಷದಿಂದ ಅವರಲ್ಲಿಗೆ ಬರುತ್ತಾನೆ. ಅವನು ಅಲ್ಲಿಗೆ ಬಂದವೇಳೆ ನಡುರಾತ್ರಿ. ಆಕಾಶ ಹರಿದು ಬೀಳುತ್ತದೆಯೆಂಬಂತೆ ಮಳೆ ಧಾರಾಕಾರ ಸುರಿಯುತ್ತಿದೆ. ಇತ್ತ ಇಳೆಯಾಂಡಗುಡಿಮಾರರಿಗೆ "ಹಾಸಲಂ ಹೊದೆಯಲಂ ಹರನ ನಾಮ" ಮಾತ್ರ ಉಳಿದಿದೆ. ಮುರಿದ ಮನೆಯ ಮೂಲೆಯಲ್ಲಿ ಮೂವರೂ ಮುದುಡಿ ಕುಳಿತಿದ್ದಾರೆ. ಆಗ ಆ ವೃದ್ಧನು ಅಲ್ಲಿಗೆ ಬರುತ್ತಾನೆ. ಇಳೆಯಾಂಡಗುಡಿಮಾರನು ಮೂವರು ಕುಳಿತುಕೊಳ್ಳುವಷ್ಟು ಸ್ಥಳದಲ್ಲಿ ಒಬ್ಬರಿಗಾಗುವಷ್ಟು ಉಳಿಸಿ-ಜಂತೆಗಳನ್ನು ಮುರಿದು-ಆತನಿಗೆ ಉರಿಮಾಡುತ್ತಾನೆ. ಶಶಿಧರನು ಚಳಿನೀಗಿ ಸ್ವಲ್ಪ ಮೈಬೆಚ್ಚಗಾದಮೇಲೆ ಮೂರುಪವಾಸದಿಂದಿದ್ದ ಅವರಿಂದ ಆಹಾರ ಬೇಡುತ್ತಾನೆ. ಪಾಪ! ಹೊಲದಲ್ಲಿ ಇದೇ ಬಿತ್ತಿದ್ದಾನೆ. ಆ ಬೀಜಗಳನ್ನೇ ನಡುರಾತ್ರಿ, ಗುಡುಗುಸಿಡಿಲುಗಳ ರಕ್ಷಣೆಯಲ್ಲಿ ಪ್ರಳಯೋಪಮ ಮಳೆಯಲ್ಲಿ ಹೋಗಿ ತಂದು, ಕಾಸಿ, ಹುರಿದು ಅವನಿಗೆ ಬಡಿಸುತ್ತಾನೆ. ಆಗ ಶಿವನು "ಸಮಪಂಕ್ತಿಯಲ್ಲಿ ಉಣ್ಣುವುದು ಶರಣಧರ್ಮ, ಎಲ್ಲರೂ ಕೂಡಿ ಉಣ್ಣೋಣ" ಎಂದು ಕರೆಯುತ್ತಾನೆ. ಶಿವನಿಗಾಗಿಯೇ ಬಾಳೆಯೆಲೆ ತರಹೋಗಿದ್ದ ಅವರ ಮಗ ಹಾವು ಕಡಿದು ಸತ್ತಿರುತ್ತಾನೆ. ಹೇಗೆ ಕೂಡಿ ಉಣ್ಣಬೇಕು? "ಕೂಗಿ ನೋಡೋಣ, ಆತ ಏಳದಿದ್ದರೆ ತನ್ನ ತಲೆಯನ್ನೇ ಕೊಡಬೇಕು" ಎಂದು ಮಗನನ್ನು ಕರೆಯುತ್ತಾನೆ. ಮಗ ಅದೇ ನಿದ್ರೆ ತಿಳಿದೆದ್ದಂತೆ ಏಳುತ್ತಾನೆ. ಶಿವನು ಪ್ರತ್ಯಕ್ಷನಾಗುತ್ತಾನೆ. ಮೂವರಿಗೂ ಗಣಪದವಿಯನ್ನು ಕೊಡುತ್ತಾನೆ.

ಸಕಲವನ್ನೂ ಶರಣರಿಗೆ ಸಮರ್ಪಿಸಿದ ಮಹಾದಾನಿಯ ಕಥೆ ಇದು.

## ಸೇದಿರಾಜನ ಕಥೆ

ಚೋಳದೇಶದ ತಿರುನಾವಲೂರೊಳಗೆ ಸೇದಿರಾಜನೆಂಬ 'ಮನ್ನೆಯ'ನಿದ್ದನು. ಅವನು ಮಹಾಶಿವಯೋಗಿಯೂ ಉಜ್ವಲ ಶಿವಭಕ್ತನೂ ಆಗಿದ್ದನು. ಅವನಿಗೆ ವಿವೇಕವೇ ಪ್ರಧಾನಿ, ಬುದ್ಧಿಯೇ ಮಂತ್ರಿ, ಶಿವಜ್ಞಾನವೇ ಸ್ನೇಹಿತ. ಅಭವ ಭಕ್ತ್ಯಾಂಗನೆಯೇ ಅಂಗನೆಯಾಗಿ ಜಗದಲ್ಲಿ 'ಮುನೀಶ್ವರ ಮನ್ನೆಯ'ನೆನ್ನಿಸಿಕೊಂಡಿ

ದ್ದನು. ಶಿವಭಕ್ತರ ಬರವೇ ತನ್ನ ಹರಣವೆಂದು ಯಾವಾಗಲೂ ಭಕ್ತರ ಆಗಮನ ವನ್ನೇ ಹಾರೈಸುತ್ತಿದ್ದನು. ಹೀಗಿರುತ್ತಿರಲು ದೂರದೇಶದ ಒಬ್ಬ ಅರಸು ಸೇದಿರಾಜನ ಕೀರ್ತಿಗೆ ಕರುಬಿ ಏರಿಬಂದು ಸೋತುಹೋದನು. ಸೇದಿರಾಜನು ಉಜ್ವಲ ಭಕ್ತನೆಂಬುದನ್ನು ತಿಳಿದು ಸೋತುಹೋದ ಅರಸನು ಅವನನ್ನು ಕೊಲ್ಲಲು ಒಂದು ಕಪಟೋಪಾಯವನ್ನು ಬಗೆದನು. ಭಕ್ತನ ವೇಷವನ್ನು ಹಾಕಿಕೊಂಡು ಸೇದಿರಾಜನ ಅರಮನೆಯನ್ನು ಪ್ರವೇಶಿಸಿದನು. ಏಕಾಂತದಲ್ಲಿ ಶಿವಾಗಮವನ್ನು ಬೋಧಿ ಸುತ್ತೇನೆಯೆಂದು ಸೇದಿರಾಜನನ್ನು ಕರೆದು ಕವಳಿಗೆಗೆ ಕೈಯಿಕ್ಕ ಹೇಳಿದನು. ಆಗ ಅದರಲ್ಲಿ ಮೋಸದಿಂದ ಮಡಗಿದ ಅಲಗು ಸೇದಿರಾಜನ ನಡುಬೆನ್ನಿನಲ್ಲಿ ನಟ್ಟಿತು. ಉಜ್ವಲ ಶಿವಭಕ್ತನಾದ ಸೇದಿರಾಜನು ಅಂಜದೆ ಅಳುಕದೆ ನಿಲ್ಲಲು ಡಂಭಕ ಭಕ್ತನು ಕಕ್ಕಾವಿಕ್ಕಿಯಾದನು. ಸೇದಿರಾಜನು ಅವನನ್ನು ಭಂಡಾರಕ್ಕೆ ಕರೆದುಕೊಂಡು ಹೋಗಿ ಸಚಿವನನ್ನು ಕರೆದು ವಿಪುಲ ಮರ್ಯಾದೆ ಮಾಡಿ ಸರ್ವರ ಸಮಕ್ಷಮದಲ್ಲಿ ಬೆನ್ನಿನಿಂದ ಅಲಗನ್ನು ತೆಗೆಯ ಹೇಳಿದನು. ಆಗ ಶಿವನು ಪ್ರತ್ಯಕ್ಷನಾಗಿ ಸೇದಿರಾಜನನ್ನು ಕೈಲಾಸಕ್ಕೆ ಕರೆದುಕೊಂಡು ಹೋಗಿ ಗಣಪದವಿಯನ್ನಿತ್ತನು.

## ಮೆಜ್‌ಮಿಂಡದೇವರ ಕಥೆ

ಧರೆಯ ಕೈಲಾಸವೆನಿಸುವ ಚೋಳದೇಶದ ತಿರುವಾಂಕೂರಿನಲ್ಲಿ ಮೆಜಿಮಿಂಡದೇವ ನೆಂಬ ಶಿವಭಕ್ತನಿದ್ದನು. ಅವನ ನಡೆ ನುಡಿ ಜೀವನವೆಲ್ಲ ಶಿವಮಯ. ಒಮ್ಮೆ ಪುರಕ್ಕೆ ತಿರುನಾಳ(ಶಿವ)ನ ಆಗಮನಕ್ಕಾಗಿ ಮೆಜಿಮಿಂಡದೇವರು ಅನೇಕ ಭಕ್ತರ ನೆರವಿಯೊಂದಿಗೆ ಕಾಯುತ್ತಿರಲು ನಂಬಿಯಣ್ಣನು ಕುದುರೆಯನ್ನೇರಿ ದಾರಿಯಲ್ಲಿನ ಭಕ್ತರನ್ನು ಲೆಕ್ಕಿಸದೆ ಶಿವಾಲಯಕ್ಕೆ ಹೋಗಿ ಕುದುರೆಯನ್ನಿಳಿಯುವನು. ಮೆಜಿಮಿಂಡ ದೇವನು "ಘನಮಹಿಮರೆನಿಸ ಭಕ್ತರುಗಳಿಗೆಜಿಗದಿರ್ದ ಭಕ್ತಿಯ ಕೈಕೊಂಬನೇ ಶಿವನು?" ಎಂದು ಕೋಪದಿಂದ ನುಡಿಯುವನು. ಶಿವಭಕ್ತರ ಕೋಪವನ್ನು ಅರಿತ ನಂಬಿ ಯಣ್ಣನು ವನಕ್ಕೆ ಓಡಿಹೋದನು. ನಂಬಿಯಣ್ಣನ ಆರ್ತಭಕ್ತಿಗೆಮೆಚ್ಚಿದ ಶಿವಲಿಂಗವೂ ವನಕ್ಕೆ ಹೋಗುತ್ತದೆ. ಶಿವಾಲಯದ ಬಾಗಿಲು ಮುಚ್ಚಿಕೊಳ್ಳುತ್ತದೆ. ನೆರೆದ ಭಕ್ತರೆಲ್ಲ ಶಿವದಿಡುತ್ತಾರೆ. ಮೆಜಿಮಿಂಡದೇವನು ಶಿವಭಕ್ತರನ್ನು ಮಾರಿದ "ಸರ್ವೇಶಂ ಪೂಜಿಗೆ"ಂದು ಡಂಗುರವನ್ನು ಹೊಯ್ಸುವನು. ಶಿವನು ನಂಬಿಯಣ್ಣನಿಗೆ ಶಿವಭಕ್ತ ರನ್ನು ಉಪೇಕ್ಷಿಸಬಾರದು ಎಂದು ನಿರೂಪವಿತ್ತು ಅವನೊಂದಿಗೆ ಮರಳಿ ಪುರಕ್ಕೆ ಬಿಜಯಂಗೈಯುವನು. ನಂಬಿಯಣ್ಣನಂತಹ ಪರಮಭಕ್ತನ ಮೇಲೆ ಕೋಪಗೊಂಡೆ ನಲ್ಲಾ ಎಂದು ಮೆಜಿಮಿಂಡದೇವನು ಹರಿತವಾದ ಅಲಗಿನಿಂದ ತನ್ನ ಕುತ್ತಿಗೆಯನ್ನು ಕತ್ತರಿಸಿಕೊಂಡು ಪಶ್ಚಾತ್ತಾಪವನ್ನು ವ್ಯಕ್ತಪಡಿಸುವನು. ಶಿವನು ಪ್ರತ್ಯಕ್ಷನಾಗಿ ಅವನನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನೀಯುವನು.

## ಅಮರನೀತಿಗಳ ಕಥೆ

ಚೋಳದೇಶದ ತಿರುನಲ್ಲೂರೊಳಗೆ ಅಮರನೀತಿಯೆಂಬ ಶಿವಭಕ್ತನಿದ್ದನು. ಆವನು ನಿತ್ಯವೂ ಶಿವಾಲಯಕ್ಕೆ ಬಂದು ಅಲ್ಲಿ ನೆರೆದ ಭಕ್ತರಿಗೆಲ್ಲ ವಸ್ತ್ರದಾನಮಾಡಿ ತನ್ನ ಅಪೂರ್ವಭಕ್ತಿಯನ್ನು ವ್ಯಕ್ತಪಡಿಸುತ್ತಿದ್ದನು. ಅವನ ಭಕ್ತಿವಾರ್ತೆ ಕೈಲಾಸಕ್ಕೆ ಕುಡಿವರಿದು ಶಿವನಡಿಗೆ ತಾಗಿತು. ಅಮರನೀತಿಗಳ ಭಕ್ತಿಯನ್ನು ಪರೀಕ್ಷಿಸಲು ಶಿವನು ಭೂಲೋಕಕ್ಕೆ ಭಕ್ತವೇಷದಲ್ಲಿ ಬಿಜಯಂಗೈಯುವನು. ತನ್ನ ಕೌಪೀನವನ್ನು "ನಾನು ಮರಳಿ ಬರುವವರೆಗೆ ನಿಮ್ಮಲ್ಲಿಯೇ ಇರಲಿ" ಎಂದು ಅಮರನೀತಿಗಳ ಕೈಯಲ್ಲಿ ಕೊಟ್ಟು ಅದನ್ನು ಮತ್ತಾರ ಕೈಯಲ್ಲಿ ಕೊಡಕೂಡದೆಂದೂ, ಅದು ನೆನೆದುದನ್ನು ಕೊಡುವ ದಿವ್ಯ ಕೌಪೀನವೆಂದೂ ಹೇಳಿ ಹೊರಟುಹೋಗುವನು. ಅಮರನೀತಿಯು ಅತ್ಯಂತ ಆಶ್ಚರ್ಯದಿಂದ ಅದನ್ನು ಬಟ್ಟೆಯ ದಿಂಡುಗಳಲ್ಲಿ ಮಡಗುವನು. ಭಕ್ತ ವೇಷದ ಶಿವನು ಮರಳಿ ಬಂದು ತನ್ನ ಕೌಪೀನವನ್ನು ಕೊಡು ಎಂದು ಕೇಳಲು ಅದು ಇಟ್ಟಲ್ಲಿಯೇ ಮಾಯವಾಗಿತ್ತು. ಅಮರನೀತಿ ಕಕ್ಕಾವಿಕ್ಕಿಯಾಗಿ ಅದಕ್ಕೆ ಬದಲಾಗಿ ಬೇರೆ ಬಟ್ಟೆಯನ್ನು ಕೊಡುತ್ತೇನೆ ಎಂದು ಹೇಳಿದರೂ ತನ್ನ ಕೌಪೀನವೇ ಬೇಕೆಂದು ಭಕ್ತವೇಷದ ಶಿವನು ಹಟಹಿಡಿಯುವನು ನೆರೆದ ಶಿವಭಕ್ತರೆಲ್ಲ ಪರಿಪರಿಯಿಂದ ಬೇಡಿ ಕೊಂಡರೂ ಕೇಳಲಿಲ್ಲ. ಕೊನೆಗೆ ಭಕ್ತವೇಷದ ಶಿವನು ತನ್ನಲ್ಲಿ ಮತ್ತೊಂದು "ಮಾಱುಡೆ ಕೌಪು" ಇದೆಯೆಂದೂ ಅದರ ತೂಕಕ್ಕೆ ಸರಿತೂಕ ಅರಿವೆಯನ್ನು ಕೊಡ ಬೇಕೆಂದೂ ಹೇಳುವನು. ತಕ್ಕಡಿಯಲ್ಲಿ ಅಮರನೀತಿಯು ಎಲ್ಲ ಬಟ್ಟೆಗಳನು ಹಚ್ಚಿ ತೂಗಿದರೂ ಆ ಕೌಪೀನಕ್ಕೆ ಸರಿಯಾಗದಿರಲು ಅವನು ತನ್ನ ಹೆಂಡತಿ ಮಗ ಸಹಿತವಾಗಿ ತಾನೇ ತಕ್ಕಡಿಯ ಪರಡಿಯನ್ನು ಏರುವನು ಆಗ ತೂಕ ಸರಿಯಾಗುವುದು ಶಿವನು ಪ್ರತ್ಯಕ್ಷನಾಗಿ ಅಮರನೀತಿಯ ವೀರಭಕ್ತಿಗೆ ಮೆಚ್ಚಿ ಅವನನ್ನು ಸತಿಸುತರು ಸಹಿತ ವಾಗಿ ಕೈಲಾಸಕ್ಕೆ ಕೊಂಡೊಯ್ದು ಗಣಪದವಿಯಲ್ಲಿರಿಸುವನು.

# ವಿಮರ್ಶೆ

ಪಂಪಮಹಾಕವಿಯ ಚಂಪೂಕಾವ್ಯಮಾರ್ಗವು ಬಿಲನಾಗಿದ್ದ ಕಾಲದಲ್ಲಿ ರಗಳೆ ಯೆಂಬ ನವೀನ ಕಾವ್ಯರೂಪದಲ್ಲಿ ಶಿವಶರಣರ ಜೀವನಚರಿತ್ರೆಯನ್ನೊರೆದು, ಕನ್ನಡ ದಲ್ಲಿ ಕಾವ್ಯಾತ್ಮಕಚರಿತೆಗಳ ಹೊಸರೀತಿಯ ಸಾಹಿತ್ಯವನ್ನು ಸೃಷ್ಟಿಸಿ, ಹರಿಹರದೇವನು ತನ್ನ ಪ್ರಜ್ಞಾಶಯವನ್ನು ಮೆರೆದಿದ್ದಾನೆ. ಚಂಪೂಕಾವ್ಯಗಳಲ್ಲಿ ವೈವಿಧ್ಯಕ್ಕಾಗಿ ಕ್ವಚಿತ್ತಾಗಿ ಉಪಯೋಗಿಸುತ್ತಿದ್ದ ರಗಳೆಯನ್ನು ಮಹಾಕಾವ್ಯಕ್ಕೆ ವಾಹಕವನ್ನಾಗಿಸಿದ ಕೀರ್ತಿ ಹರಿಹರನಿಗೆ ಸಲ್ಲುತ್ತದೆ. ಹರಿಹರನದು ಧುಮ್ಮಿಕ್ಕುವ ಪ್ರತಿಭೆ. ಅವನ ರಭಸದ ಕಾವ್ಯಪ್ರವಾಹಕ್ಕೆ ರಗಳೆ ಒಳ್ಳೆಯ ಮಾಧ್ಯಮವಾಯಿತು. ಗಿರಿಜಾಕಲ್ಯಾಣ

ದಲ್ಲಿ ಚಂಪೂಮಾರ್ಗವನ್ನೇ ಅನುಸರಿಸಿದ್ದರೂ ಚಂಪೂ ಅವನ ಪ್ರಕೃತಿಗೆ ಒಗ್ಗುವ ಕಾವ್ಯರೂಪವಲ್ಲವೆಂಬುದು ಸಹೃದಯನಿಗೆ ಕೂಡಲೇ ವೇದ್ಯವಾಗುತ್ತದೆ.

ಉಜ್ವಲ ಶಿವಭಕ್ತಿ ಹರಿಹರನ ಕಾವ್ಯಕ್ಕೆ ಸ್ಥಾಯಿ. ಅವನೊಬ್ಬ ಭಕ್ತಕವಿ; ಶಿವಕವಿ. ಅವನ ಕಲ್ಪನೆ ಶಿವಪರ, ಶಿವಮಯ. ಶಿವಗಣದ ರಗಳೆಗಳಲ್ಲೆಲ್ಲ ಅವನ ಶಿವದರ್ಶನ ಒಂದೇ ವಿಧವಾಗಿ ಅಭಿವ್ಯಕ್ತಿ ಪಡೆದಿದೆ.

ಕೆಲವು ದೀರ್ಘವಾದ ರಗಳೆಗಳಲ್ಲಿ ಒಂದು ಸ್ಥಲ ರಗಳೆ, ಇನ್ನೊಂದು ಸ್ಥಲ ಗದ್ಯ ಹೀಗೆ ಗದ್ಯಪದ್ಯಗಳ ಮಿಶ್ರರೂಪವನ್ನು ಆವಿಷ್ಕರಿಸಿ ಕಾವ್ಯದಲ್ಲಿ ವೈವಿಧ್ಯವನ್ನು ಮೆರೆದಿದ್ದಾನೆ. ಹರಿಹರನ ರಗಳೆಗಳಲ್ಲಿ ಬರುವ ಗದ್ಯ, ಚಂಪೂಕಾವ್ಯಗಳಲ್ಲಿ ಪದ್ಯಗಳ ನಡುವೆ ಬರುವ ಗದ್ಯದಿಂದ ಭಿನ್ನವಾಗಿದೆ. ಕೇವಲ ಶಾಸ್ತ್ರಬದ್ಧವಾದ ಶುಷ್ಕಗದ್ಯವನ್ನು ಹರಿಹರನು ಬರೆಯಲಿಲ್ಲವೆನ್ನುವುದನ್ನು ಲಕ್ಷಿಸಬೇಕು. ಭಾಷೆಯ ವಿಷಯದಲ್ಲಿ ಹರಿಹರನು ಕನ್ನಡ ಆಡುಮಾತಿನ ಲಯವಿನ್ಯಾಸ ಹಾಗೂ ಪದಪುಂಜಗಳನ್ನು ಹೇರಳವಾಗಿ ಬಳಸಿ ಕ್ರಾಂತಿಯನ್ನು ಸಾಧಿಸಿದ್ದಾನೆ. ನಡುಗನ್ನಡದ ಭಾಷೆಯ ಸ್ವರೂಪ ಅವನ ರಗಳೆಗಳಲ್ಲಿ ಸುಸ್ಪಷ್ಟವಾಗಿದೆ.

ಹರಿಹರನು ತನ್ನ ಕೃತಿಗಳಲ್ಲೆಲ್ಲ ಅದ್ಭುತವಾದ ನಾಟ್ಯಶಕ್ತಿಯನ್ನು ಮೆರೆದಿದ್ದಾನೆ. ಅವನ ಶೈಲಿಯ ವೈಶಿಷ್ಟ್ಯಗಳೆಲ್ಲ ಇಲ್ಲಿ ಬಂದ ರಗಳೆಗಳಲ್ಲಿ ಸುವ್ಯಕ್ತವಾಗಿವೆ. ತಿರುನೀಲಕಂಠರ ರಗಳೆಯಲ್ಲಿ ವೃದ್ಧಮಾಹೇಶ್ವರನ ಸನ್ನಿವೇಶ ಹಾಗೂ ಅಮರನೀತಿಗಳ ರಗಳೆಯಲ್ಲಿ ಭಕ್ತವೇಷದ ಶಿವನು ಅಮರನೀತಿಯೊಂದಿಗೆ ನಡೆಸಿದ ಸಂಭಾಷಣೆಗಳು ಅವನ ನಾಟ್ಯಪ್ರತಿಭೆಗೆ ನಿದರ್ಶನಗಳಾಗಿವೆ.

ಇಲ್ಲಿ ಬಂದಿರುವ ರಗಳೆಗಳನ್ನೋದಿದರೆ ಸಹೃದ್ದರ್ಶನಕ್ಕೆ ಗೋಚರವಾಗುವುದು ಕಣ್ತೆರೆದ ಹರಿಹರ ಮಹಾಕವಿಯ ದಿವ್ಯಕಾವ್ಯಪ್ರತಿಭೆ. ಆತನು ಉಸಿರಿಟ್ಟರೆ ಪರಿಮಳಿಸುವ ಕಾವ್ಯವಾಗುತ್ತದೆ. ತಿರುನೀಲಕಂಠರಿಗೆ ಹದಿನಾರರ ಹರೆಯ ಸಂಪ್ರಾಪ್ತವಾದಲ್ಲಿ ಮಾಯೆಗೆ ಉಬ್ಬಸ ಬಂದಿತಂತೆ. ಆಣೆ ಪಕ್ವಕ್ಕೆ ಬಂದಂತೆ ತಿರುನೀಲಕಂಠ ದಂಪತಿಗಳಿಗೆ ಮುಪ್ಪು ಬಂದಿತಂತೆ. ಇಹೇಪಗೆಯಾಂಡರಲ್ಲಿಗೆ ಬಂದ ಭೂತೇಶ್ವರನನು ಮುಟ್ಟಿದೊಡೆ ಶಿಲೆಯಂಕುರಿಸುತ್ತಿತ್ತಂತೆ. ಬೆಳುದಿಂಗಳಿಂದ ಮಾಡಿದ ಮೂರ್ತಿಯಾತನಂತೆ. ಯೌವನದ ಆ ಜಂಗಮ ಆ ಜಂಗಮರೂಪಿ ಪರಶಿವನು ಬಂದರೆ ವಸಂತರಾಜನ ಬಳಿಯ ಲತೆ ಮಿಡುಕಿದಂತಾಯಿತಂತೆ. ಇಳೆಯಾಂಡಗುಡಿಮಾರನು ಶಿವಭಕ್ತಿ ಸಸಿಯನ್ನು ಬಿತ್ತಿ ಬೆಳೆಯುತ್ತಿದ್ದನು. ಪಾಪದ ಕಳೆಗಳನ್ನು ಕಿತ್ತಿ ಕಳೆಯುತ್ತಿದ್ದನು.

ಹೀಗೆ ಮಾತುಮಾತಿನಲ್ಲಿ ಕುಡಿವರಿದು ಚೆಲ್ಲವರಿಯುತ್ತಿರುವ ಕಾವ್ಯ ಪ್ರತಿಭೆಗೆ ಹರಿಹರನಲ್ಲಿ ಕೊರತೆಯೆಂಬುದೇ ಇಲ್ಲ. ಆತನ ಪ್ರತಿಭೆ ಅತ್ಯಂತ ಶ್ರೀಮಂತ ಭಾವ, ಭಾಷೆ ಎರಡೂ ಒಂದಕ್ಕೊಂದು ಕೂಡಿಕೊಂಡು ಧುಮ್ಮಿಕ್ಕುತ್ತವೆ. ಒಂದು ಭಾವವನ್ನು ಒಮ್ಮೆ ಹೇಳಿದರೆ ಕವಿಗೆ ತೃಪ್ತಿಯಿಲ್ಲ. ಹತ್ತೆಂಟು ವಿಧವಾದ ನಿತ್ಯ ನೂತನ ಹೋಲಿಕೆಗಳನ್ನು ಕೊಟ್ಟು ರಸಪರಿಪಾಕವನ್ನುಂಟುಮಾಡುತ್ತಾನೆ. ಹರಿಹರನ ಕಾವ್ಯ ಶೈಲಿಯ ವೈಶಿಷ್ಟ್ಯವಡಗಿರುವುದು ಇಲ್ಲಿ. ಆತನ ಕಾವ್ಯ ವಾಚ್ಯಕ್ಕೆ ವಾಚ್ಯ, ಧ್ವನಿಗೆ ಧ್ವನಿ.

ಹರಿಹರನ ಕಥಾವಸ್ತು ತಮಿಳುನಾಡಿನಿಂದ ಬಂದಿದ್ದರೂ ಅದನ್ನು ಪೆರಿಯ ಪುರಾಣವ ಮಕ್ಕಾಮಕ್ಕಿ ಅನುವಾದ ಮಾಡದೆ ಕವಿ ತನಗೆ ಕೇಳಿಬಂದ ಕಥೆಯನ್ನು ರಗಳೆಗಳಲ್ಲಿ ಬಳಸಿಕೊಂಡಿದ್ದಾನೆ. ತಮಿಳುನಾಡಿನಲ್ಲಿ ಸಂಚರಿಸಿ ಪುರಾತನರ ಸ್ಥಳಗಳನ್ನು ಕಣ್ಣಾರೆ ಕಂಡಿರುವ ಸಂಭವವೂ ಇದೆ. ಕಾವೇರಿಯಲ್ಲಿ ಈತನ ಕಾವ್ಯಗಂಗೆ ಬೆರಸಿ ಬೇರಿಲ್ಲದಾಗುವಳ.. ಹರೀಶ್ವರನಿಗೆ ತಮಿಳು ಭಾಷೆಯ ಪರಿಚಯವೂ ಇರಲಿಕ್ಕೆ ಸಾಕು. ಅಂತೆಯೇ ಮಹಾಕವಿ ಶೇಕ್ಕಿಳಾರನ ಕಥೆಗಿಂತ ಹಲವೆಡೆ ಭಿನ್ನರೀತಿಯಲ್ಲಿ ಕಥೆಯನ್ನೊರೆಯುವ ಸಾಹಸಮಾಡುತ್ತಾನೆ ಕನ್ನಡದ ಈ ಮಹಾಕವಿ ಹರೀಶ್ವರನ ರಗಳೆಗಳಿಂದ ಕನ್ನಡದ ಕಾವ್ಯವಸ್ತು ಹಿಗ್ಗಿದೆ; ಅರಳಿದೆ; ಮಗಮಗಿಸಿದೆ. ಹಿಂದೆ ರಾಮಾಯಣ, ಮಹಾಭಾರತಗಳಿಗೂ, . ಜೈನಪುರಾಣಗಳಿಗೂ ಪರಿಮಿತವಾಗಿದ್ದ ಕನ್ನಡದ ಕಾವ್ಯಭಂಡಾರ ಈಗ ಗರಿಗೆದರಿ ಹಾರಿ ವಿಸ್ತಾರವಾದ ಹೊರ ಪ್ರಪಂಚವನ್ನು ಕಂಡಿತು. ಕಥಾವಸ್ತುವಿನ ದೃಷ್ಟಿಯಿಂದ ಇಲ್ಲಿ ಬಂದಿರುವ ರಗಳೆಗಳಿಗೆ ವೈಶಿಷ್ಟ್ಯವಿದೆ. ಆತನನ್ನು ಅನುಸರಿಸಿ ಕನ್ನಡದಲ್ಲಿ ಪುರಾತನರ ವಿಷಯಕ ಸಾಹಿತ್ಯ ವಿಪುಲವಾಗಿ ಬೆಳೆದಿದೆ. ಎಲ್ಲರ ಮೇಲೆಯೂ ಆತನ ಪ್ರಭಾವ ಮುದ್ರೆಯೇ ಮುದ್ರೆ. ಇಲ್ಲಿ ಬಂದಿರುವ ಆರು ರಗಳೆಗಳು ಆತನ ಪುರಾತನರ ರಗಳೆಯ ಪ್ರಾರಂಭದ ರಗಳೆಗಳು. ಪ್ರಾಯಶಃ ಈ ರಗಳೆಗಳನ್ನು ಕವಿ ತನ್ನ ರಘಟಾಕಾವ್ಯಶೈಲಿಯ ಆರಂಭ ದಸೆಯಲ್ಲಿಯೇ ಬರೆದಂತೆ ತೋರುತ್ತದೆ. ಆದರೂ ಎಲ್ಲೆಲ್ಲಿಯೂ ಪಳಗಿದ ಭಾವ, ಪಳಗಿದ ಶೈಲಿ. ಮುಂದೆ ವಿಶ್ವಸಾಹಿತ್ಯಕ್ಕೆ ಚಿರನೂತನ ಕಾಣಿಕೆಯೆನಿಸಿದ ಬಸವರಾಜದೇವರ ರಗಳೆ, ನಂಬಿಯಣ್ಣನ ರಗಳೆ, ಮಹಾದೇವಿಯಕ್ಕನ ರಗಳೆ ಮುಂತಾದ ಸತ್ಫಲಗಳ ಅಂಕುರಗಳನ್ನು ಇಲ್ಲಿ ಕಾಣಬಹುದು.

# ಪೀಠಿಕೆ

ನೋಡೆಲೆ ಹಂಪೆಯ ಪ್ರಭುವಿನೊಳ್ಸಲೆ ಸಂದಱುವತ್ತುಮೂವರಂ
ಕೂಡೆ ಜಗಜ್ಜನಂ ಬಯಸಿ ಬಣ್ಣಿಸುತಿರ್ಪಱುವತ್ತುಮೂವರಂ
ಪಾಡುತಮಾಡುತಂ ಪೊಗಳ್ವಿನುನ್ನತಿವೆತ್ತಱುವತ್ತುಮೂವರಂ
ಬೇಡಿತನೀವರಂ ಸುಕೃತಜೀವರನಪ್ರತಿಮಪ್ರಭಾವರಂ || ೧ ||

ಹಂಪೆಯ ಶಂಕರದೇವರ
ಹಂಪೆಯ ಗುರುಮಾದಿರಾಜದೇವರ ಮತ್ತಾ
ಹಂಪೆಯ ಮಾದರಸರ ದಯೆ
ಯಿಂ ಪೊಗಳ್ದಂ ರಸಿಕಚಕ್ರಿ ಹರಿಹರದೇವಂ || ೨ ||

ಶರಣರ್ಗೆಱಗದ ನಂಬಿಗೆ
ನೆರವಾದ ಪುರಾರಿ [2]ವೆರಸು[2] ಹೋಱಗೆನೆ ಮೆಱೆ[1]ವಿಂ
ಡರ ಮುಳಿಸ ತಿಳುಪಲಭವಂ
ಕರುಣಿಸಲಱುವತ್ತು ಮೂವರಾದರ್ಧರೆಯೊಳ್ || ೩ ||

---

೧ಳ್ಕೆಱೆ (ಅ) ೨ವೆರಸಿ (ಬ, ಮ), ಸಹಿತ (ಹ,ದ) * ಬ, ಮ ಗಳಲ್ಲಿ ಈ ಪದ್ಯವಿಲ್ಲ.

ಶ್ರೀ

ಧರೆಯಱಿಯಲ್ಕನುವೆರಸಿಯೆ
ನೆಱೆ ಸಂದಱುವತ್ತುಮೂವರೊಳ್ಮೊದಲ ಮಹೇ
ಶ್ವರರ[೧] ತಿರುನೀಲಕಂಠರ
ಚರಿತವನವಧರಿಸು ಹಂಪೆಯ ವಿರೂಪಾಕ್ಷಾ ||

ಶ್ರೀ ಚೋಳದೇಶವೊಪ್ಪಿರ್ಪುದು ಧರಾತಳಕೆ
ವಾಚಾಮಗೋಚರವದಱ ವಿಸ್ತರಂ ಜಗಕೆ
ಆದೊಡಂ ನಾನದಂ ಬಲ್ಲಂತೆ ಬಣ್ಣಿಪೆಂ
ಸಾದರಂ ಕಡುನೇಹದಿಂದಿಂತು ಪೊಗಳ್ದಪೆಂ
ಲೋಕಪಾವನವೆನಿಸಿ ಪರಿವ ಕಾವೇರಿಯಿಂ
ನಾಕಮಂ ನಗುವ ನಗರಂಗಳಿರ್ಪೋಜೆಯಿಂ
ಎವೆ[೨]ಯಿಕ್ಕಲಿಂಬಿಲ್ಲದಿರ್ಪ ಶಿವಭವನದಿಂ
[೩]ಕ್ರಮದಿಂದೆ[೩] ಮಿಗೆಮೆಱೆವ ತಿರುನಾಳ್ಗಳೊಪ್ಪದಿಂ
ಸರ್ವದೆಸೆಗಂ ಪರೆದು ಪರಿವ [೪]ಕಾಲುವೆಗಳಿಂ[೪]
[೫]ಸಾರ್ವರ್ತುಕೋದ್ಯಾನ[೫]ವೆನಿಸಿದ ಬನಂಗಳಿಂ
ಎಳನೀರ್ಗಳಿಂ ಬೆಳೆವ ಕರ್ಬುದೋಂಟಂಗಳಿಂ
ಫಳರಸದಿ ಬೆಳೆವ ನವಶಾಳಿಯ[೬] ವನಂಗಳಿಂ
[೭]ತೆನೆ[೭]ವಾಲನುಂಡು ಬೆಳೆವರಗಿಳಿಗಳುರ್ಕಿನಿಂ
ಕೊನರಂ ಕರ್ದುಂಕಿ ಕೂಗುವ ಪಿಕದ ಸೊರ್ಕಿನಿಂ
ಕುಸುಮಕುಲಮಂ ಮುತ್ತಿ ಝೇಂಕರಿಪ ತುಂಬಿಯಿಂ
ಪೊಸಕೊಳಂಗಳೊಳೊಲಿದು ನಲಿವಂಚೆಯಿಕ್ಕೆಯಿಂ

ಇಂತೊಪ್ಪುವಾದೇಶದೊಳಗೆ [೮]ಮೆಱೆದುದು[೮] ಕರಂ
ಸಂತತಂ ಧರೆಗೆ ಪೊನ್ನಾಂಬಲಂ ಶಿವಪುರಂ

---

೧ ನ (ಬ, ಮ). ೨ ವೆ (ಬ, ಮ). ೩ ತವಕದಿಂ (ಬ, ಮ). ೪ ಪರಿಕಾಲ್ಗಳಿಂ (ಬ, ಮ). ೫ ಸರ್ವಮುಕ್ತಿಧ್ಯಾನ (ಬ, ಮ). ೬ ಳೀ (ಬ, ಮ). ೭ ತನಿ (ದ). ೮ ಬೆಳೆವುದು (ಬ).

ಆ ಪುರದ ವಿಸ್ತರವನೇನೆಂಬೆನೀ ಧರೆಗೆ
ಕಾಪಾಲಿ ಸಂತತಂ ನೆಲಸಿರ್ಪನದಱೊಳಗೆ
ಶಿವನಿಷ್ಠೆಯೇ ಕೋಂಟೆಯಾಗಿರ್ಪುದಾಪುರಕೆ
ಭವನ ಭಕ್ತಿಯೆ ಸಂದ ಕಾಹು ನೋಡಾಪುರಕೆ
ಗುಣ್ಪಱಿಯಬಾರದಾಚಾರದಗಳಾಪುರಕೆ
ಬಿಣ್ಪಿನಿಂದೊಪ್ಪುವಾಗನುವೆಯಾಳ್ವರಿಯದಕೆ
[೧]ಶಿವನ ನಾಮವೆ ನೆಗಳ್ದ[೧] ಬಿರುದಿನಟ್ಟಣೆ[೨]ಯದಕೆ
ಶಿವಪುರಾಣವೆ[೩]ಸಮೆದ ಬಾಗಿಲುಗಳಾಪುರಕೆ
ಸ[೪]ಲೆ ಸೋಮಸೂರ್ಯವೀಥಿಗಳಿಲ್ಲವಾಪುರಕೆ
ಸಲೆ ಸಂದ ಶಿವವೀಥಿ ಹರವೀಥಿಯಾಪುರಕೆ
ಎಸೆವ ಪಂಚಾಕ್ಷರಿಯೆ ಪರಮನರಮನೆ ನೋಡ
ಪಸರಿಸುವ ಪುಣ್ಯಂಗಳೊಪ್ಪುವ ಮುಗಿಲ್ನೋಡ
ಸತ್ಯಂಗಳುಕ್ಕಡಂ ಶರ್ವನರಮನೆಯೊಳಗೆ
ನಿತ್ಯಂಗಳೆಚ್ಚಱಿಕೆ ಶಂಕರನ ಸಭೆಯೊಳಗೆ

ಇಂತೆ[೫]ನಿಪ[೫] ಶಿವನ ಸೊಬಗಿನ ಸೊಂಪನೊಳಕೊಂಡು
ಕಂತುಹರನಿರ್ಪ ಸೆಜ್ಜೆಯ ಸೊಬಗ[೬]ನೆಡೆಗೊಂಡು[೬]
ಎಸೆವ ಪುರದೊಳಗೆಲ್ಲ ಹರಮಯಂ ಶಿವಮಯಂ
ಎಸೆವ ಕೇರಿಗಳೊಳಗೆ ಶಿವನ ಭಕ್ತರಮಯಂ
ಶಿವನ ಪೂಜಾಸಂಭ್ರಮಂ [೭]ಮನೆಮನೆಗಳೊಳಗೆ[೭]
[೮]ಭವನ ಕಾಲಂ[೮]ದುಗೆಯ ಧ್ವನಿ [೯]ಮನೆಮನೆಗಳೊಳಗೆ[೯]
ದಿನವು ಬೇಱಿಲ್ಲ ತಿರುನಾಳೆ ದಿನವಾಪುರಕೆ
ಮನವು ಬೇಱಿಲ್ಲ ಶಿವಭಕ್ತಿ ಮನವಾಪುರಕೆ
ಕೊಂಕಣನ ಕೊಡೆ ನೋಡೆ ನೋಡೆ ಹಾಱಿದುದಿಲ್ಲಿ
ಬಿಂಕದಿಂದೇಱಿರ್ದ ಪೆರ್ಬುಲಿ ಮಡಿದುದಿಲ್ಲಿ
ಕರುಣದಿಂ ಶಶಿಧರಂ ನಾಟ್ಯವಾಡಿದನಿಲ್ಲಿ
ಹರುಷದಿಂದಂ ವ್ಯಾಘ್ರಪಾದನೋಡಿದನಿಲ್ಲಿ
ಕೈಲಾಸವದಕೆ ಹುರುಡಿಸುತಲಿರ್ಪುದು ನೋಡ
ಮೇಲೆನಿಪ ಮೇರು ಸೆಣಸುತ್ತಿರ್ಪುದುಂ ನೋಡ

೧ ಶಿವನಾಗಮುವೆ ನೆಗೆವ (ಹ, ದ). ೨ ಳೆ (ಬ). ೩ ಣಂ (ಬ) ೪ ಎ (ಬ). ೫ ಸೆವ (ಬ) ೬ ನೊಳಕೊಂಡು (ಅ, ಬ, ಹ, ದ) (ಪಿ). ೭ ಮನೆಗಳೊಳಗೆಲ್ಲ (ಬ). ೮ ಶಿವನಪವನಂ (ಬ). ೯ ಮನೆಗಳೊಳಗೆಲ್ಲ.

ಇಂತು ಶಿವಸಂಪದವನೊಳಕೊಂಡು ಶಿವಪುರಂ
ಸಂತತಂ ರಂಜಿಪುದು ಪೊನ್ನಾಂಬಲದ ಪುರಂ
ಎಸೆವ ಪುರದೊಳಗೊರ್ಬ[೧] ಭಕ್ತನಿರ್ಪಂ ನೋಡ
ಪೆಸರೆಸೆವ ತಿರುನೀಲಕಂಠಕುಶವನೋರ್ಡ
ಆವರರಸಿ ಮುತ್ತೈದೆಯೆಂಬ ನಾಮದ ವನಿತೆ
ಅವರ್ಗಳಿರ್ಬರ್ಗೆ ಹದಿನಾಱಱ ಹರೆಯವನಿತೆ
ಆ ಯೌವನದೊಳವರ ಚರಿತಂ ಕರಂ ಪೊಸತು
ಮಾಯೆಗುಬ್ಬಸದ ಶಿವಭಕ್ತಿ ಮನದೊಳು ಬಲಿತು
[೨]ನಡೆನುಡಿಯೊಳಭವನೆಂದೆನಿಸಿರ್ಪ[೨]ನಾ ಪುರಕೆ
ಮೃಡಮೂರ್ತಿ[೩]ಯೆನಿಸಿಕೊಂಡಿರ್ಪನಂತಾ[೩] ಪುರಕೆ

ಇಂತಿರುತೆ ನಿತ್ಯಲಿಂಗಾರ್ಚನೆಗೆ ನಡೆತಂದು
ಸಂತಸಂಬಡುತೆ ಹರನಾಲಯಕ್ಕೈತಂದು
ಕರಗುತೆ ವಿಭೂತಿಯುಮನುದ್ಧೂಳನಂ ಮಾಡಿ
ಹರುಷದಿಂ ಪಾಡುತಂ ರುದ್ರಾಕ್ಷಿಯಂ ಸೂಡಿ
ಬಲವರಲು ಮನವಾಗಿ ನಲವಿಂದೆ ನಿಂದಿರುತೆ
ನಲಿದಕ್ಕಱುಬ್ಬರಿಪ ಚರಣದಿಂದಡಿಯಿಡುತೆ
ಅಲ್ಲಲ್ಲಿ ಶಿವಪುರಾಣಗಳಂ ಕೇಳುತಂ[೪]
ಸಲ್ಲೀಲೆ [೫]ಪೆರ್ಚಿ[೫] ನಯನಾಶ್ರುವಂ ಸೂಸುತಂ[೬]
ನುಡಿಗೊಮ್ಮೆ ಪುಳುಕುವೇಳುತ್ತೆ ದಡದಡಿಸುತ್ತೆ
ಅಡಿಗೊಮ್ಮೆ ಜೋಲ್ದು ಭಿತ್ತಿಗಳನುಱೆ ಮಲಗುತ್ತೆ
ಏಳುತ್ತಮೇಳುತ್ತೆ ಅಡಿಗೆಟ್ಟು ಕುಳ್ಳಿರುತೆ
ಕೇಳುತ್ತೆ ಕೇಳುತ್ತೆ ಕಣ್ಮುಚ್ಚಿ ಕರಗುತ್ತೆ
ಒಳಗೆ ಶಿವಮೂರ್ತಿಯಂ ತಳೆದು ಮೆಲ್ಲಡಿಯಿಡುತೆ
ಗಳಿಗೆ[೭]ಗೊಂದೊಂದಡಿಯನೊಯ್ಯನೊಯ್ಯನೆ ಇಡುತೆ[೭]
ಲೀಲೆಯಿಂ[೮]ದಿಂತಂ[೮]ತು ಎಂತಕ್ಕೆ ಬಲವಂದು
ಲಾಲಿಸುತೆ ರಂಗಮಂಟಪದ ಮಧ್ಯ[೯]ದೊಳಂದು[೯]

೧ ರ್ವ (ಬ,ಮ). ೨ ನಡೆವನುಡಿವ...(ವಿ); ನಡೆನುಡಿವಭವನೆನಿಸಿಕೊಂಡಿಪ್ಪ (ಬ).
೩ ಯೆಂದೆನಿಸಿಕೊಂಡಿರ್ಪನಾ (ಅ, ಮ, ದ). ೪ ತ್ತೆ (ಬ). ೫ ಯಿಂದೆ (ಬ).
೬ ತ್ತೆ (ಬ). ೭ ಗೊಂದಡಿಯ ಮೆಲ್ಲನೆ ಮೆಲ್ಲನಿಳುಪುತ್ತೆ (ಬ). ೮ ದಿಂ (ಬ).
೯ ದಿನಂದು (ಬ).

ಮೆಲ್ಲಮೆಲ್ಲನೆ ಹತ್ತೆ ಸಾರ್ದು ನೋಡುತೆ ಪೆರ್ಚಿ
ಸಲ್ಲೀಲೆ[೧]ಯಿಂ ಪೂಜಿಸಲ್ಕೆಂದು[೧] ಮೆಯ್ವೆರ್ಚಿ
ಪೂವಿನಿಂದೊಮ್ಮೆ ಪೊಸ ಪುಳುಕದಿಂದೊಮ್ಮೊಮ್ಮೆ
ಭಾವದಿಂದೊಮ್ಮೆ ಭರಿತಾಶ್ರುವಿಂದೊಮ್ಮೊಮ್ಮೆ
ತೊದಳಿಂದಲೊಮ್ಮೆ ಗದುಗದುಕೆಯಿಂದೊಮ್ಮೊಮ್ಮೆ
ಮುದದಿಂದಲೊಮ್ಮೆ ಮುಗ್ಧತೆಯಿಂದಲೊಮ್ಮೊಮ್ಮೆ
[೨]ಧ್ಯಾನ[೨]ದಿಂದೊಮ್ಮೆ [೩]ಹರವಸದಿಂದಲೊ[೩]ಮ್ಮೊಮ್ಮೆ
[೪]ಮೌನ[೪]ದಿಂದೊಮ್ಮೆ [೫]ಮನಸವೇಗದಿಂದೊ[೫]ಮ್ಮೊಮ್ಮೆ
ಅಕ್ರಮದೊಳೊಮ್ಮೆ ಪರಿವಿಡಿಯಿಂದಲೊಮ್ಮೊಮ್ಮೆ
[೬]ವಿಕ್ರಮದೊಳೊಮ್ಮೆ[೬] ಕರಗುತ್ತ[೭]ಲಂತೊ[೭]ಮ್ಮೊಮ್ಮೆ
ಅರ್ಚಿಸುತ್ತರ್ಚಿಸುತ್ತಾರು[೮]ಲತ್ತ ಬೊಬ್ಬಿಡುತೆ
ಮಚ್ಚಿಸುತೆ ಮಚ್ಚಿಸುತೆ ತೆಗೆದು ಮುಂಡಾಡುತ್ತೆ
ಪಾಡುತ್ತೆ ಪೊಗಳುತ್ತೆ ಬಾಯ್ಗೆ ಬಂದುದನೆಂದು
ನೋಡುತ್ತೆಯಾಡುತ್ತೆ ನಲಿದು ವಿಸಟಂಬರಿದು
ಕುಂಬಿಕ್ಕಿ ಕುಣಿಕುಣಿದು ನಡೆಗೆಟ್ಟು ಕುಳ್ಳಿರ್ದು
ಅಂಬಳಿಕೆ ಮೈಯಿಕ್ಕಿ ಲಲ್ಲೆಗಜೆವುತ್ತಿರ್ದು
ಏನಯ್ಯ [೯]ಏನಭವ ಏನೆನ್ನ[೯] ಮನದೊಲವೆ
ಏನಯ್ಯ ಏನೆನ್ನ ಪೊನ್ನಾಂಬಲದ ನಲವೆ
ಏನೆನ್ನ ಶಂಕರನೆ ಏನೆನ್ನ ಶಶಿಧರನೆ
ಏನೆನ್ನ ಸುಖಮಯನೆ ಏನೆನ್ನಮೃತಮಯನೆ
ಎಂದು ಕೊಂಡಾಡಿ ಬೋಳೈಸಿ ಹಾರೈಸುತಂ
ನಿಂದು ನೋಡುತೆ ಮತ್ತೆ ಮತ್ತೆ ಕೊಂಡಾಡುತಂ
ಪೋಗಲಾಜದೆ ತಿರುಗಿ ತಿರುಗಿ [೧೦]ಕೊಂಡಾಡುತಂ[೧೦]
ರಾಗದಿಂದ[೧೧]ಗ್ಗಿಸುತೆ[೧೧] ಹಿಗ್ಗಿ ಪೊರೆಯೇಱುತಂ

---

೧ ಯಿಂದ ಪೂಜಿಸಲೆಂದು (ಬ). ೨ ದೈನ್ಯ (ಅ). ೩ ದರಹಾಸದಿಂದೊ (ಅ). ೪ ಮಾನ್ಯ (ಬ). ೫ ಮದವೇಱುತ್ತಲೊಮ್ಮೊಮ್ಮೆ (ಬ). ೬ ಅಕ್ರಮದೆಯಿಂದೊಮ್ಮೆ (ಬ, ಹ). ೭ ಲೊ (ಬ). ೮ ಡು (ಅ, ದ, ಹ). ೯ ಎನ್ನ ಭವ ಎಂತೆನ್ನ (ವಿ). ೧೦ ಪೊಡವಂಡುತಂ (ಅ), ಪೊಡವಡುವುತಂ (ಬ). ೧೧ ಗ್ಗವಿಸಿ (ದ, ಹ), ಗ್ಗಲಿಸಿ (ಮ).

ನಡುವಗಲ್ತೊಡಗಿ ಮಧ್ಯಮರಾತ್ರಿ ಪರಿಯಂತ
[1]ಎಡೆವಱಿಯದೀತೆಱದೊಳರ್ಚಿಸುತ್ತಂ ಸಂತ[1]
[2]ವಿ[2]ರ್ದಿದ್ದು ದೆಂತಕ್ಕೆಯಭವನಂ ಬೀಳ್ಕೊಂಡು
ಸಾರ್ದ ಹರವರಿಯ ಹರುಷಾಂಬುಧಿಯನೊಳಕೊಂಡು
ಪೊಱಮಟ್ಟ ಸಚ್ಚಶಿವಲಿಂಗಾರ್ಚಕಂ ನೋಡೆ
ನೆಱೆ ತೀವಿ ಪುರದೊಳಗೆ ಧೂಪಧೂಮಂ[3] ಕೂಡೆ
ಹರನನರ್ಚಿಸಿದ ಪರಿಯಂ ನೆನೆದು ಪದವಿಡುತೆ
ತಿರುಗಿ ತನ್ನರಮನೆಗೆ ಎಂದಿನಂದದಿ ಬರುತೆ
ಬರೆ ಪುರದ ವೀಧಿಯೊಂದುಪ್ಪರಿಗೆಯೊಳು ನಿಂದು
ಹರನೋಲಗದ ನಾಯಕಿಯ ವಿಳಾಸಿನಿಯಂ[4]ದು
[5]ತೊಳೆದ[5] ಪರಿಯಾಣದುದಕವ[6]ನಲ್ಲಿ ಚಲ್ಲುತಿರೆ
[7]ಕೆಳಗೆ[7] ತಿರುನೀಲಕಂಠ[8]ರ ಮೇಲೆ ಚಿಮ್ಮುತಿರೆ
ತಿರುನೀಲಕಂಠ ತಿರುನೀಲಕಂಠಾ ಎಂದ
ಸರವನೊಳಗಿರ್ದ ನಾಯಕಿ ಕೇ[9]ಳಿ ಭರ್ಯದಿಂದ
ಎಳ್ದು ಗಡಗಡನೆ ನಡುಗುತೆ ಬಂದು ಸೈಗೆಡೆದು
ಬಿಳ್ದು ತಿರುನೀಲಕಂಠರ ಚರಣಮಂ ಪಿಡಿದು
ಕರುಣಿಪುದು ಸರ್ವಾಪರಾಧಿ ಮರುಳಾನೆಂದು
ಚರಿತದಿಂ[10] ಮನೆಗೆ ಬಿಜಯಂಗೈಸಿ [11]ಕರೆತಂದು[11]
ಪರಿಮಳೋದಕದಿಂದೆ ಮಹಮಜ್ಜನಕ್ಕೆಱೆದು
ವರದುಕೂಲವನುಡಿಸಿ [12]ಹೊದೆಸುತಂ[12] ನಲಿನಲಿದು
ದಿವ್ಯಗಂಧಗಳಿಂದಲನುಲೇಪನಂ ಮಾಡಿ
ನವ್ಯಕುಸುಮಂಗಳಂ ಸಿರಿಮುಡಿ[13]ಯೊಳಗೆ[13] ಸೂಡಿ
ಕಪ್ಪುರದ ವೀಳೆಯಮನಾದರಂ ಮಿಗೆ ಕೊಟ್ಟು
ತಪ್ಪಂ ಮಱೆವುದೆಂದು ಭಕ್ತಿಯಿಂ ಪೊಡಮಟ್ಟು
ದೇವ ಬಿಜಯಂಗೈವು[14]ದೆನೆ ಸಂತಸಂಬಟ್ಟು[14]
ದೇವ ತಿರುನೀಲಕಂಠರು[15] ತಿರುಗಿ ಪೊಱಮಟ್ಟು

೧ ಎಡೆವಿಡಪೆ ಈ ಪರಿಯೊಳರ್ಚಿಸುತೆ ಸಂತತಂ (ಮ), ಎಡೆವಿಡದೊಲೀತೆಱದೊಳರ್ಚಿಸುತೆ ಸಂತತಂ (ಬ). ೨ ಇ (ಅ,ಬ,ದ,ಹ. ೩ ವ್ರಂ ಮ, ಬ. ೪ ಯೊಂ (ಬ, ಮ). ೫ × (ಬ). ೬ ಮುಮ ಬ. ೭ × ಬ). ೮ +ಕುಶವ (ಬ). ೯ ಳೆ ಭರ (ಬ). ೧೦ +ದಂ (ಬ). ೧೧ ತಂದಂದು (ಬ,. ೧೨ ಆದರಿಸುತಂ (ಹ, ದ). ೧೩ ಗೆನೆಱೆ (ಬ). ೧೪ ದೆಂದು ಸಂತಸಬಿಟ್ಟು (ಅ,ದ). ೧೫ ರಂ (ಬ).

[೧]ಬರಲೊ[೧]ಸರ್ವ ಸೌರಭಂ ಕೇರಿಯೊಳು [೨]ಸರಿವುತಿರೆ[೨]
ಪರಿಮಳಂ ಪಟ್ಟಣದ ನಾಲ್ದೆಸೆಗೆ ಸೂಸುತಿರೆ

ಬಂದು ಮನೆಯೊಳಗೆ ಪೊಸಕಂಪು [೩]ಕವಿದಿರೆ ಕಂಡು[೩]
ಎಂದಿನಂತಲ್ಲದೆ [೪]ನವೀನ[೪]ವಾಗಿರೆ ಕಂಡು
ಮನದೊಳಗೆ ಮುತ್ತೈದೆ ಮುಳಿದು ಸಿಡಿಮಿಡಿಗೊಂಡು
ಎನಲಮ್ಮದೊಳಗೊಳಗೆ ಜಿನು[೫]ಗಿ ಗುಜುಗುಜುಗೊಂಡು
ನಯನದೊಳಗಕ್ಕೆಯಂ ನೋಟದೊಳು ಮುನಿಸುವಂ
ಬಯಕೆಯೊಳು ಬರನುವಂ ಮೌನದೊಳು ನುಡಿಯುಮಂ
ಮನದೊಳಗೆ ಚಿಂತೆಯಂ ನೇಹದೊಳು ಕೋಪಮಂ
ನೆನಹಿನೊಳು ಬೆಱಗುಮಂ ತನುವಿನೊಳು ಬಿಸುಪುಮಂ
ಬೈತಿಡು[೬]ತೆ ಬಂದು ಮಾನಿನಿ ಪತಿಯ ಕಾಲ್ತೊಳೆದು
ಸೈತಾಗಲೆಡೆಮಾಡಿ ಬೋನಂಗಳಂ ಪಿಡಿದು
ಆರೈಸಲಿಕ್ಕೆ ತಾಂಬೂಲಾದಿಗಳನಿತ್ತು
ದೂರಿಸುತ್ತಂ ಪ್ರಸಾದವ ಸವಿದು ಭಯಮು[೭]ತ್ತು
ಸಿರಿಮಂಚವನು ಪಚ್ಚಡಿಸಿ ಕೊಟ್ಟು ಸುಯ್ಯುತಂ
ತಿರುನೀಲಕಂಠಕುಶವರ ಕೆಲದೊಳೊಪ್ಪುತಂ
ಬಾಡಿರ್ದ ಲತೆಯಂತೆ ಬೆಂಬಿರ್ದು ಪಟ್ಟಿರಲು
ನಾಡೆ ಚಿಂತೆಯೊಳಗಾಳುತ್ತೆ ಮುಳುಗುತ್ತಿರಲು
[೮]ರತಿಯರ್ಥದಿಂದತನು ಪುಷ್ಪಧನುವಂ ಕೊಂಡು
ಪತಿಯುನಲ್ಲಾಡೆ ಮನದೊಳಗೆ ಸಲೆ ನಸೆಗೊಂಡು[೮]
ಕಾಮಾನುರಾಗದಿಂ ತಮ್ಮರಸಿಯುರ ಮೇಲೆ
ನೇಮಕ್ಕೆ ಕೈಯಿಕ್ಕೆ ಸಿಡಿಮಿಡಿಗೊಳುತೆ ಬಾಲೆ
ಮುಟ್ಟಿದಡೆ ಶಿವನಾಣೆ ಎನುತೆ ಕೈಯಂ ನೂಂಕೆ
ತೊಟ್ಟನೆ ಬೆದಱ ಕೋಡಿ ಕೊರಗಿ ನೋವುತಲವಕೆ

---

೧ ಬರೆ ಒ (ಬ). ೨ ತೀವುತಿರೆ (ಬ). ೩ ಕೈರವಗೊಂಡು (ಬ). ೪ ನವಿರ (ಬ). ೫ ನಿ (ಬ). ೬ ರು (ಬ). ೭ ವೆ (ಅ, ದ). ೮ ರತಿಯರ್ಥದಿಂ ನೆಗೆದ ಪುಷ್ಪ ಧನುವಂ ಕೊಂಡು ಸತಿಯುನಲ್ಲಾಡೆ ಮನದೊಳಗೆ ಸತಿ ಭಯಗೊಂಡು (ಅ, ದ).

[೧]ಎಂದುವುಂ ಕೇಳದಕ್ಕರ ತನ್ನ ಕಿವಿ ಯನುಗೆ[೧]
ನೊಂದು ಹೌವನೆ ಹಾರಿ ಕರಗಿ ಕೊರಗುತ್ತೆ ಮಿಗೆ
ಅಳುಕಿ ಬಾಯಳಿದು ಬಸವಳಿದು ಕೂಳ್ಗುದಿಗೊಂಡು
ಬಳುಕಿ ಬೆದ ಬೆದ ಬೆಂದು ಕುದಿದು ಕೋಟಲೆಗೊಂಡು
ಆಣೆಯೆಂಬಲಗಿನೇಱಾಗೀಾತನ ಕಿವಿಗೆ
ಹೂಣೆಹೊಕ್ಕೆಲ್ಲವಂ ನೆಱೆ ಘಾತಿಸಲ್ಕೆ ಮಿಗೆ
ಇಂದುಮುಖಿ ಇಟ್ಟಾಣೆ ತೀವಿತ್ತು ಕಿವಿಯೊಳಗೆ
ಅಂದಿಂದೆ ಕಿವಿಯೇಸುವಂ ಕೇಳದಾತಾಗೆ
ಆಣೆಯಿಬ್ಬರ ದೇಹದೊಳು ಹೊಕ್ಕು ಬೆಳೆಬೆಳೆದು
ಹೂ[೨]ಣೆಯಾದುದು ಪರಶಿವನ ಆಜ್ಞೆಯಂ ತಳೆದು
ಆ ದಿನಂ ಮೊದಲಾಗಿ ತಮ್ಮೊಳೊರ್ಬೊರ್ಬರೇ
ನಾದಡಂ ಸೋಂಕದೀ ಧರೆಗೆ ತಾವಿರ್ಬರೇ
ಈ ನುಡಿಯ ತಾವಿರ್ಬರಱಿವರೀಶ್ವರನಱಿವ
ಈ ನೆಲದೊಳಾರುವಱಿಯರು ಭಕ್ತರಿಪ್ಪಿರವ

ಇಂತು ಶಿವನಾಜ್ಞೆಯಂ ಚಿತ್ತದೊಳು ತಳೆವುತಂ
ಸಂತತಂ ಭಕ್ತರ್ಗೆ ಬೇಡಿದುದನೀವುತಂ
ಶರಣರಂ ಕುಲದೈವವೆಂದು ಕೊಂಡಾಡುತಂ
ಶರಣರ್ಗೆ ವಂಚನೆಯನುಳಿದು ಸಲೆ ಮಾಡುತಂ
ಹರನ ಭಕ್ತರ್ತಮಗೆ ತಂದೆತಾಯ್ಗಳು ನೋಡ
ಪರಮ ಭಕ್ತರ್ತಮಗೆ ಬಂಧುಬಳಗಂ ನೋಡ
ಲಿಂಗವೇ ಪ್ರಾಣ[೩]ವಾಗಿರ್ಪುದಾಗಳು ತಮಗೆ[೩]
ಲಿಂಗಭಕ್ತಿಯೆ ಮೆಱೆವ ಕಣ್ಣುಗತಿ[೪]ಯೋ ತಮಗೆ[೪]
ಇಂತೆಸೆದು ಶಿವನ ಭಕ್ತಿಗೆ ತವರ್ಮನೆಯಾಗಿ
ಕಂತುಮದಹರ[೫]ನಾಜ್ಞೆಯೋ ತಮಗೆ[೫] ನೆಲೆಯಾಗಿ
ಪ್ರಾಣದೊಳಗಡಗಿತ್ತು ಹರನಾಣೆಯದು ನೋಡೆ
ಆಣೆಯೊಳಗಡಗಿತ್ತು ಅವರ ಯೌವನ ನೋಡೆ

---

೧ ಅಂದಂದ ಮಾತಾಗ ತನ್ನ ಕಿವಿಯುಂ ತಾಗೆ (ಬ). ೨ ಆ (ಬ). ೩ ವರ್ಜನೆ ದೇಹವಾತಂಗೆ (ವಿ) ೪ ಯಾತಂಗೆ (ವಿ). ೫ ನ ಆಜ್ಞೆಗೆ ತಾನೆ (ಅ, ಪ, ದ).

ಜಪವೇ[೧]ವುದವರಿಬ್ಬರಿರವು ಸಾಲದೆ ಹೇಳ
ತಪವೇವುದವರಿಬ್ಬರಿರವು ಸಾಲದೆ ಕೇ[೨]ಳ
ಅವರಿರವು ಸ್ವರ್ಗಗಿರ್ಗದ ಪದವಿಗಳ ಹವಣೆ
ಅವರಿರವು ಮುಕುತಿಗಿಕುತಿಯ ಸುಖಂಗಳ ಹವಣೆ
ಎಂಬ ಕೀರ್ತಿಗೆ ತಾವು ಪಾತ್ರರಾಗುತ್ತಮಿರೆ
ನಂಬಿ ಪಲಕೆಲವು ವತ್ಸರವರ್ಜಿ[೩]ಸುತ್ತವಿರೆ
ಆಣೆ ಪಕ್ವಕ್ಕೆ ಬಂದಂತೆ ಬಂದುದು ಮುಪ್ಪು
ಹೊಣೆಹೊಕ್ಕವಯವದೊಳೆಯ್ದೆ ತೀವಿತು ಮುಪ್ಪು
ಶಿವಭಕ್ತಿ ಸೋಪಾನದಂತೆ ತೆರೆಗಳು ಮಸಗೆ
ಶಿವನಲ್ಲದಾರುಮಿಲ್ಲೆಂಬಂತೆ ತಲೆ ನಡುಗೆ
ಭವಿಗಳಂ ನೋಡೆನೆಂಬಂತೆ [೪]ಕಣ್ಮುಂಜೊಗೆಯೆ[೪]
[೫]ಸಿವುರಿ ತಲೆಗೇಱಿತ್ತು ಸಂಕೃತವೆನೆ ನರೆ ನೆರೆಯೆ[೫]
[೬]ಹಲವು ಕರ್ಮಕ್ಕಡಿಯನಿ[೬]ಡದಂತೆ ನಡೆಯುಡುಗೆ
ಉಲಿವ ಮಾಯೆಯ [೭]ಕೇಱುವಂತೆ[೭] ಕೈಗಳು ನಡುಗೆ
[೮]ಜರೆಯಡಸಲಿಂತು ತೊಂಬತ್ತನೆಯ ವರ್ಷದೊಳು
ಹರನಾಜ್ಞೆಯಂ ತಾಳ್ದು ಬಾಳ್ದಿರ್ಪ ಸಮಯದೊಳು[೮]

ಶಿವನಱಿದಿವರ ಮನವನೊರೆದು ನೋಡುವೆನೆಂದು
ಪವಣಿಸಿದನೊಂದು [೯]ವೇಷವ[೯] ಶರೀರದೊಳಂದು
ಹೂಸಿದ ವಿಭೂತಿ ಕೈಯೊಳು ಪಾತ್ರೆ[೧೦]ಯೆಸೆವ[೧೦] ಜಡೆ
ಭಾಸುರದ ಪುಲಿದೊವಲು ಲಾಕುಳಂ ಚೆಲ್ವ ನಡೆ
ಎಸೆವ ಭಿಕ್ಷುಕನ ವೇಷವನೊಪ್ಪೆ ಕೈಕೊಂಡು
ಹೆಸರ ಪೊನ್ನಾಂಬಲದ ಪುರದತ್ತ ನಡೆಗೊಂಡು

---

೧ ವಾ (ಅ, ಹ, ದ). ೨ ಹೇ (ಬ). ೩ ರ್ಜಿ (ಅ). ೪ ಕಣ್ಣೆವೆ ಮುಗಿಯೆ (ಅ, ಬ, ಹ, ದ). ೫ ಅವಿರಳದಿ ನೆನೆವು ಶುಭ್ರತೆಯಂತೆ ನೆರೆಹೊಳೆಯೆ (ಅ,ಬ,ಹ,ದ). ೬ ಬಲವರಲ್ಕಲ್ಲಡಡಿಯಿ (ವಿ). ೭ ತೆಱುಗುಡಪಂತೆ (ಅ) ತೇರುವಂತೆ (ಹ). ೮ ಹರೆಯವಿಬ್ಬರಿಗೆ ತೊಂಬತ್ತನಾಲ್ಕೈದಾಗೆ ಹರದಾಜ್ಞೆಯಂ ತಳೆದು ನಲವಿಂದಲಿಬ್ಬರಿಗೆ (ಬ). ೯ ನಿಲವಂ (ಅ). ೧೦ ಯೇಕ (ಬ).

ಸತ್ಯಶರಣರ ಮನವ ನೋಡು[೧]ವುತ್ಸವದಿಂದೆ[೧]
ನಿತ್ಯನ[೨]ರವಣಿಸಿ[೨] ಬರುತಿರ್ದನುಮ್ಮಹ[೩]ದಿಂದೆ[೩]
ಹಾರಯಿಸುತುಂ ಹಿಗ್ಗುತುಂ ಹೊಂಗಿ ಹೊಗಳುತ್ತೆ
[೪]ತೀರಿತೆ[೪]ನ್ನಳವಲ್ಲ ನಿಷ್ಠೆ[೫]ಯಿಗೆ ಪಿರಿದೆನುತೆ[೫]
ನಡೆತಂದು ಪುರದೊಳಗೆ ಪೊಕ್ಕು ಕೇರಿಗಳಲ್ಲಿ
ಮೃಡನ ಭಕ್ತರ [೬]ಮನೆಗಳಂ ನೋಡಿ[೬] ತಾನಲ್ಲಿ
ಬಂದು ತಿರುನೀಲಕಂಠರ ಮನೆಯ ಮುಂದಿರಲು
ನಿಂದು ನಲವೇಱುತಂ ದನಿದೋಱುತಂ ನಿಲಲು
ತಿರುನೀಲಕಂಠಕೇಶವರು ಹಿಗ್ಗಿ ಹೆಚ್ಚುತ್ತೆ
ಪರಮಹರುಷಂ ಮಿಕ್ಕು ಭಕ್ತನಂ ಕಾಣುತ್ತೆ
ಕಂಡೇಳ್ವ ಭರದಿಂದೆ ಮುನ್ನಂ ಪುಳಕವೆಳ್ದು
ದಂಡ[೭]ಪ್ರಣಾಮದಿಂ[೭] ಮುನ್ನಂ ಮನಂ ಬಿಳ್ದು
ಪಿಡಿದಪ್ಪಿ ಪದಮಂ ಸುಖಾಶ್ರುವಿಂದಂ ತೊಳೆದು
ಕಡುಂಲ್ಲೆಗಱಿವುತಂ ಕಿಂಕರತೆಯುಂ ತಳೆದು
ಸಿರಿ ಪರುಷ ಕಲ್ಪತರು ಸುರಧೇನುಗಳು ಬಂದ
ಹರುಷದಿಂ ನೂರ್ಮಡಿಯೆನಿಪ್ಪ ಸಂತಸದಿಂದ
ಎಲೆ ದೇವದೇವ ಬಿಜಯಂಗೆಯ್ದು ಕರುಣಮಂ
ನಲಿದು ಬೆಸಸುವುದೊಲ್ದು ಮಾಳ್ಪೆನಾ ಕಜ್ಜಮಂ
ಎನೆ ದೇವ[೮]ನೆಂದ ತಾಂ ಭಕ್ತರೆಂದಾ[೮]ರುಮಂ
ಮನದೊಳಗಪೇಕ್ಷೆಗೆಯ್ವೆವು ಬೇಡೆವೇನುಮಂ
ಆವೊಬ್ಬರೊಡವೆಗಳುವುವರಲ್ಲ ಜಗವಱಿಯೆ
ಆನಾರುಮಂ ನಿರೋಧಿಸುವರಲ್ಲೆಳೆಯಱಿಯೆ
ಕ[೯]ಡವೇಡ ನೀನೆನಗದೇನುವಂ ಪಾತ್ರೆಯಂ
ಕೆಡದಂತೆ ಬಯ್ತಿಟ್ಟು ಕ[೯]ಡುವುದೀ ಪಾತ್ರೆಯಂ
ಎಂದವರ ವಶದೊಳಿರಿಸುತ್ತೆ ಹತ್ತಡಿಯಿಟ್ಟು
ಬಂದು ಮತ್ತೊಂದು ಕುಹಕವನಾಗ ಮುಂತಿಟ್ಟು
ಈ ಪಾತ್ರೆಯೆಮ್ಮ ಭಕ್ತರು ಕೊಟ್ಟ ಪದವಿಯ[೧೦]ಂದು
ಕಾಪಾಲಿಯಾಡಡಂ ಬಯಸುವ ಸುವಸ್ತುವಿದು

---

೧ ತ್ತವಂತಲ್ಲಿ (ಬ). ೨ ತ್ಸವಿಸಿ (ಬ). ೩ ದಲ್ಲಿ (ಬ) ೪ ತೀರದೆ (ಬ). ೫ ಪಿರಿದೆಂದೆನುತೆ (ಬ). ೬ ಮನಂ ನೋಡುತಂ (ಬ). ೭ ವತ್ರಣತಿಯಿಂ (ಬ). ೮ ಭಕ್ತರೆಂಬುವರ ನಾವಾ (ಅ) ೯ ಕೊ (ಬ). ೧೦ ಯಿ (ಬ).

ಬೇಡಿದುದನೀವುದು ಮಹಾಸಿದ್ಧಿಯುಳ್ಳುದಿದು
ಬೇಡದಿರ್ದುದನೀವುದೆಂತುಂ ವಿಚಿತ್ರವಿದು
ಇದ ನೀವೆ ಬಲ್ಲಂತೆ ಪರಿರಕ್ಷಿಸುವುದೆನುತೆ
ಪದಪಿಂದೆ ಪೋದನ[೧]ದರಿದಿವರ ಪರಿಯೆನುತೆ[೧]

ಇತ್ತ ತಿರುನೀಲಕಂಠರು [೨]ನಡಂನಡು[೨]ನಡುಗಿ
[೩]ಇತ್ತ[೩] ಪಾತ್ರೆಯ[೪]ನೋವಿ[೪] ರಕ್ಷೆಯಿಂದಂ ಮಡಗಿ
ಪೆಟ್ಟಿಗೆಯೊಳಿಕ್ಕಿ[೫] ಮುದ್ರಿಸಿ ತಾವೆ ಕಾಹಾಗಿ
ನಟ್ಟನಡುವಿರಿಸಿಕೊಂಡಿರ್ಬರುಂ ನೆನಹಾಗಿ
ಇರೆ ಮಱುದಿವಸದುದಯದೊಳು ಭಕ್ತನೆಯ್ತಂದು
ಉರವಣಿಸುತಂ [೬]ಕುಡು ಕುಡೆನ್ನ[೬] ಪಾತ್ರೆಯನೆಂದು
ಬಿಡುವನ್ನೆಗಂ [೭]ತಡವಿದೆಲ್ಲಿ[೭] ಇರಿಸಿದಿರೆನುತೆ
ಕುಡದಿರ್ದೊಡಾಂ ಹೋಹೆನೆಂದು ಮುಂದಡಿಯಿಡುತೆ
ಅನುವಿಷುತೆ[೮] ಭಕ್ತನುರವಣಿಸಿ[೯] ಸಿಡಿಮಿಡಿಗೊಳುತೆ
ಮನದೊಳಂಜುತ್ತ ತಡಬಡಗೊಂಬುತುಂ ಬಿಡದೆ
ಮುಚ್ಚುಳಂ ತೆಱೆ[೧೦]ಂದೇನುಮಿಲ್ಲದಿರೆ ಬೆಱಗಾಗಿ
ಅಚ್ಚುಗಂಗೊಳುತೆ ಜೋಲುತ್ತೆ ಹಮ್ಮದವೋ[೧೧]ಗಿ
ನಡುಗುತ್ತೆ ಬೆಮರ್ದು ಭೀತಿಯು ಪರಮಕಾಷ್ಠೆಯಿಂ
ನುಡಿಯಲಱಿಯದೆ ಕರಗಿ ಕೊರಗಿ ಕಡು ಭೀತಿಯಿಂ
ನೆಲನಂ ಬಗಿದು ಪುಗಲು ಬಯಸುತಂ ಬಾಡುತಂ
ತಲೆವಾಗಿ ಸಿಗ್ಗಾಗಿ ಮರುಳಾಗಿ ನೋಡುತಂ

ಇರೆ ಕಂ[೧೨]ಡಿದ[೧೨]ನುವಾಗಿರದು ನಿಮ್ಮ ಪರಿಯೆನಗೆ
ವಿರಸವಾಗದೆ ಹೋಗದೀ ಪಾತ್ರೆಯಿನ್ನೆನಗೆ
ಗಂಟಲಂ ಕೊ[೧೩]ಯ್ದರಲ್ಲಾ[೧೩] ತೋಱಿ[೧೪] ಪೆಟ್ಟಿಗೆಯು
ಉಂಟುಂಟು ಭಕ್ತರೆಂದಿರಿ[೧೫]ಸಿದೆನಿದೀಪರಿಯ[೧೫]

---

೧ ದರಿದುಅರಿದೆಂದೆನುತೆ (ಅ, ಬ, ಹ, ದ). ೨ ನಡನಡನೆ (ವಿ), ನಡನಡಂ (ಬ). ೩ ಸುತ್ತಿ ಅ). ೪ ಹೊದ್ದಿ (ಬ, ಹ, ದ . ೫ ಟ್ಟು (ಬ). ೬ ಕೊಡುಕೊಡೆನ್ನ (ಬ). ೭ ತಡಂ ಎಲ್ಲಿ (ಮ). ೮ ವ(ಬ). ೯ ಸೆ(ಬ). ೧೦ ಗ (ಬ) ೧೧ ಬೋ (ಬ, ಮ). ೧೨ ಡೆನ (ಅ, ಬ, ಹ, ದ). ೧೩ ಯ್ದಿರೇ (ಅ, ಹ, ದ). ೧೪+ರೆ (ಅ,ಹ,ದ). ೧೫ ಸೆ ನೀವೀಪರಿಯ (ಅ,ಮ,ಹ,ದ).

[೧]ಲಿಬ್ಬರಿಂ ಪೋಪುದಂ[೧] ಬಲ್ಲನೇ ಶಿವಯೆನುತೆ
ಒಬ್ಬರುಂ ಸಾಕ್ಷಿಯಿಲ್ಲೆಂತು ಮಾಡುವೆನೆನುತೆ
[೨]ಪೆಟ್ಟಿಗೆಯನೊಮ್ಮವರ ಮೋರೆಗಳನೊಮ್ಮೊಮ್ಮೆ
ದಿಟ್ಟಿಸಿಯೆ ನೋಡುತಂ ಮರುಳಾಗುತೊಮ್ಮೊಮ್ಮೆ
ಲೇಸು ಲೇಸೆನುತೆ ಪೆಟ್ಟಿಗೆಯ [೩]ನೋಡುತಲಂ[೩]ದು
[೪]ಬೀಸುಟರಲ್ಲಿರದೆ[೪] ಹೊಱಯಿಂಕೆ ಕೋಪಿಸಿ ನಿಂದು
ಆಹಾಹ ಹಸನಾಯ್ತು ಕುಡಿರೇಕೆ ಪಾತ್ರೆಯಂ
ಓಹೋಹೊ ಇಂತು ಕೊಂಡವರುಂಟೆ ಪಾತ್ರೆಯಂ
ಏನು ಪೆಟ್ಟಿಗೆ ತಿಂದುದೋ ನೆಗಳು ನುಂಗಿತೋ
ಮೋನದಿಂದಿರ್ದ[೫]ನಿತ[೫]ಱೊಳು ಪಾತ್ರೆ ಹಿಂ[೬]ಗಿತೋ
ಇನ್ನೆನ್ನವೇಲೆ ತಪ್ಪಿಲ್ಲ ತಪ್ಪಿಲ್ಲೆನುತೆ
ಗನ್ನದಿಂ ಬಱಿಗೋಪಮಂ ತಾಳ್ದು ಝುಂಕಿಸುತೆ
ಮುಂಜೂರ ಹುಲ್ಲಸುಚ್ಚುತ್ತೆ ಶಿವಧೋಯೆನುತೆ
ಅಂಜಿಸುವ ದನಿಯಿಂದಲೊ[೭]ಱಲಿ[೭] ಶಿವಧೋಯೆನುತೆ
ನಿಂದ ಮಂದಿಗೆ ತೋಱಿ ತೋಱಿಯಾಱಿಡಿಗೊಳುತೆ
ಬಂದರ್ಗೆ ದೂಱಿನೆಱಿಸಾಱಿ ನೋಡಿರೆಯೆನುತೆ
ಕೋಪದಿಂದಾಮಿರ್ಬರಂ ನೋಡಿ ತಲೆದೂಗಿ
ಭಾಪು ಭಕ್ತರಿರ ಇಂ[೮]ತಿರವೇಳ್ಕು ಸಯ್ತಾಗಿ
ಸುಮ್ಮನಿರ್ದಡೆ ಪಾತ್ರೆಯಂ ಕೊಟ್ಟರಪ್ಪರೇ
ನಿಮ್ಮಿರ್ಬರು[೯]ಂ ಕೊಂಡು ಮನೆಯೊಳಿಂತಿಪ್ಪಿ[೧೦]ರೇ
ಇಲ್ಲಿಯೊ[೧೧]ಱಲಿದಡೇನುಮಾ[೧೧]ಗದಿಂತೆನಗೆಂದು
[೧೨]ತಿಲ್ಲಿ[೧೨]ಮೂವಾಯಿಲರು ಕಾಣಬೇಕಿದನೆಂದು
ನಡೆಯೆ ಪೊನ್ನಾಂಬಲದ ಹಿರಿಯರಿಹ ಮಂಟಪಕೆ
ನಡುವೆ ತಿದ್ದುವರಿಲ್ಲ ನಿಮ್ಮ[೧೩] ಹಿರಿಯತನಕೆ[೧೪]

---

೧ ಅಪ್ಪುದಂಬಪ್ಪುದಂ (ಅ,ಹ,ದ), ಅಬ್ಬುಡಂಬೋಪುದಂ (ಬ). ೨ +ಇಂತಪ್ಪುದಂ ಬಲ್ಲನೇ ನಾನು ಶಿವ ಎನುತೆ । ಇಂತಪ್ಪ ಚೋದ್ಯಮಂ ಬಲ್ಲನೇ ಶಿವ ಎನುತೆ (ಅ). ೩ ಸೀಕ್ಷಿಸುತಂ (ಬ). ೪ ಬೀಸಾಟುಕಳದು (ಬ). ೫ ಡಿದ (ಮ, ಬ, ಹ, ದ). ೬ ಇಂ (ಅ,ಬ,ಮ,ಹ,ದ). ೭ ದಱತಿ (ಬ). ೮ ಇರು (ಅ,ಹ,ದ). ೯ ರಿಂ (ಮ). ೧೦ ರ್ಪ (ಮ) ೧೧ ದಱಿದಡೆ ಅನುವಾ (ಬ). ೧೨ ಅಲ್ಲಿ (ಅ). ೧೩ ನಿಮ್ಮ (ಮ). ೧೪ ಕ್ಕೆ (ಮ).

ಪಡಿಯುಂಟೆ ಎನುತವರನೊಡಗೊಂಡು ಬರುತವಿರೆ
ಕಡುಗೋಪಿಸುತ್ತಂದು ದಟ್ಟಿಸುತೆ ಬರುತವಿರೆ
[೧]ಒಡನೆ ಗುಜುಗುಜುಗೊಳುತ ನೆರವಿ ಬರುಬರುತವಿರೆ[೧]
[೨]ಎಡಬಲದಿ ನೋಟಕರು ಅಚ್ಚರಿಯರಾಗುತಿರೆ[೨]
ತಿರುನೀಲಕಂಠಕುಶವರು ತಮ್ಮ ಸತಿವೆರಸಿ
ಬರುತಿರ್ದರಾ ಗುಪ್ತಮಾಹೇಶ್ವರರು ಮೊಗಸಿ

ಇಂತು ಮಾಡಿದೆನೆಮ್ಮುವಂ ಸದಾಶಿವನೆನುತೆ
ಇಂತಾಯಿತೇ[೩] ಇನಿತು ಕಾಲಕೀತೆಱನೆನುತೆ
ಮನದೊಳಗೆ ಚಿಂತಿಸುತೆ ಶಿವ[೪]ಭಕ್ತಿಮಾನಿ[೪]ಗಳು
ನೆನೆನೆನೆದು ಕಳಲುತಂ ಭಕ್ತಿಯಭಿಮಾನಿಗಳು
ಭಕ್ತನೊಡನೊಡನೆ ಕೊರಗುತೆ ನಡೆದು ಬರುತವಿರೆ
ಯುಕ್ತಿಹೊದ್ದದ ಶಿವಸ್ನೇಹಿಗಳರ್ಬರುತವಿರೆ
ಕಯ್ಯ ಹುಲ್ಲಂ [೫]ನೆಗಪಿ[೫] ದೆಸೆ[೬]ದೆಸೆಗೆ ಸಿಪಡಿಡುತೆ[೬]
ಅಯ್ಯೋ ಇದಂ ವಿಚಾರಿಸುವರಿಲ್ಲಾ ಎನುತೆ
ಬಂದನುರವಣಿಸಿ ಪೊನ್ನಾಂಬಲದ ಮಂಟಪಕೆ
ಮುಂದೆಯೋಲಗವಿತ್ತು ಕುಳ್ಳಿರ್ದರಗಲಕ್ಕೆ
ಶಿವ[೭]ನಿಷ್ಠೆ ಚಿತ್ತ[೭]ದೊಳು ಬೇರ್ವರಿದವರ್ಕೆಲರು
ಶಿವನ [೮]ನೆನಹುಂ[೮] ಮನದೊಳಂಕುರಿಸಿದರ್ಕೆಲರು
ಹರಪೂಜೆ ಹಸ್ತದೊಳು ಹಬ್ಬಿ ಬೆಳೆದರ್ಕೆಲರು
ಹರಭಕ್ತಿ ಕರಣದೊಳು ಪಲ್ಲವಿಸಿದರ್ಕೆಲರು
[೯]ಭರ್ವ[೯]ಕೀರ್ತಿ ಕಿವಿಗೆ[೧೦]ಯಾಭರಣವಾದರ್ಕೆಲರು[೧೦]
[೧೧]ಶಿವಗೀತ[೧೧] ಜಿಹ್ವೆಯೊಳು [೧೨]ಫಲ[೧೨]ವಾದವರ್ ಕೆಲರು
ಶಿವಮೂರ್ತಿ ಕಂಗಳೊಳು ಬರೆದಂತಿರಿಪ್ಪವರು
ಶಿವ[೧೩]ನುತಿ ಧ್ಯಾ[೧೩]ನದೊಳು ಮೂರ್ಛೆವೋದರ್ಕೆಲರು
ಶಿವಭಕ್ತಿ[೧೪]ಸಂಗಮಂ[೧೪] ಸವಿವುತಿರ್ಪರ್ಕೆಲರು

---

೧ × (ಬ). ೨ × (ಬ, ಮ). ೩ ಯುತ್ತ (ಬ). ೪ ಭಕ್ತಮಾಳಿ (ಮ). ೫ ತೆಗಡಿ (ಅ); ಹಿಡಿದು (ಬ), ೬ ಗೆ ಶಿವಧೋ ಎನುತೆ (ಮ). ೭ ಭಕ್ತಿ ನಿಷ್ಠೆ (ಬ,ಮ). ೮ ನೇಹಂ (ಅ,ಮ,ಹ,ದ). ೯ ಶಿವ (ಬ, ಮ). ೧೦ ಕುಸುಮಾಭರಣವಾದವರು (ಅ). ೧೧ ಶಿವನ ನುತಿ (ಅ) ೧೨ ಪಟು (ಮ). ೧೩ ನ ತದ್ಧ್ಯಾನ (ಬ, ಮ). ೧೪ ಸಂಗಳಂ (ಬ,ಮ).

ಶಿವಗೋಷ್ಠಿಯೊಳು ನಲಿದು ಸುಖಿಸುತಿರ್ಪರ್ಕೆಲರು
೧ಶಿವಶಿವಾ ಎಂದು ಕರಗುತ್ತಿರ್ಪವರ್ ಕೆಲರು೧

ಇಂತೊಪ್ಪುತಲ್ಲಿ ಮೂವಾಯಿಲಱು ಕುಳ್ಳಿರಲು
ಸಂತತಂ ಮೆಱೆವ ೨ಪೊನ್ನಾಂಬಲದೊಳೆಸೆದಿರಲ್೨
ಮುಂತೆ ಮಾಯಾವಿ ಗೊರವಂ ಬಾಯ ಮೊಱೆ೩ವೆರಸಿ೩
ಪಿಂತೆ ತಿರುನೀಲಕಂಠರು ತಮ್ಮ ಸತಿ೩ವೆರಸಿ೩
ಬರು೪ತಮಿರೆ೪ ಕಂಡಿದೇನದ್ಭುತಮೆನುತ್ತಲ್ಲಿ
ತಿರುನೀಲಕಂಠರೇ೫ಕಿವರೇಕೆನುತ್ತಲ್ಲಿ೫
ನೆರೆದ ಸಭೆ ಕೌತುಕಂಗೊಳುತಮಿರೆ ತಮ್ಮೊಳಗೆ
ಉರವಣಿಸಿ ಠಕ್ಕಗೊರವಂ ಬಂದು ಸಭೆಯೊಳಗೆ
ನಿಂದಿರಲು ತಿರುನೀಲಕಂಠಕುಶವರು ಬಂದು
ಮುಂದೆ ೬ಮೈಯಿಕ್ಕುತಂ೬ ಡಡದಡಿಸುತಂ ನಿಂದು
ಬಂದಿರ್ದ ಭಕ್ತರೆಲ್ಲರ್ಗೆ ಕೈಮುಗಿವುತಂ
ನಿಂದಿರ್ದ ಶಿವನ ಶರಣರ್ಗೆ ಹಲುಗಿಱಿವುತಂ
ಕೋಡುತಂ ೭ಕೊಂಕುತಂ ಕುಗ್ಗಿ೭ ಕಿಂಕರತೆಯಿಂ
ಬಾಡುತಂ ಬಳ್ಕುತಂ ಹೆಱ೮ಮೆಟ್ಟಿ ಭೀತಿಯಿಂ
ಕೆಲಸಾರ್ದು ಮಂಟಪದ ಗೊಂಟಿನೊಳು ಕುಳ್ಳಿರ್ದು
ತಲೆಗೆರೆದು ೯ತಗ್ಗಿ೯ ಹುದುಗುತ್ತೆ ಕೈಮುಗಿದಿರ್ದು
ಇರಲಿದೇನೆಂದು ಸಭೆಯೊರೆದೊರೆದು ಕೇಳುತಿರೆ
ತಿರುನೀಲಕಂಠಕುಶವರ್ಕೊಱಗಿ ಸುಮ್ಮನಿರೆ
ಅವರನೇನೆಂದು ಕೇಳ್ದಪಿರಾನೆ ಪೇಳ್ದಪೆಂ
ಅವರ ಪರಿಯೆಲ್ಲಮಂ ಕೇಳಿ೧೦ಯೆ ನಾ೧೦ನುಸುರ್ದಪೆಂ
ಎಮ್ಮ ಭಕ್ತರು ಕೊಟ್ಟ ಪಾತ್ರೆಯಂ ಪಿಡಿತಂದು
ತಮ್ಮ ವಶದೊಳ್ ಕೊಟ್ಟು ಬಯ್ತ೧೧ಟ್ಟು ಕೊಡಿಯೆಂದು

---

೧ × (ಬ, ಮ). ೨ ಪೇರಂಬಲದೊಳೊಪ್ಪಿರಲು (ಮ), ಪೇರಂಬಲದೊಳೆಸೆದಿರಲು (ಬ). ೩ ಸಹಿತ (ಬ). ೪ ತಿರಲು (ಬ). ೫ ಕಿಂತಿದೇಕೆನುತಲ್ಲಿ (ಬ, ಮ). ೬ ಮೈಯಿಕ್ಕಿ ಮಿಗೆ (ಮ, ಅ). ೭ ಕಂದುತಂ ತಗ್ಗಿ (ಬ). ೮ ಱಿ (ಬ, ಮ). ೯ ಕುಗ್ಗಿ (ಬ), ತಳ್ಗಿ (ಮ). ೧೦ ಯಲಾ (ಬ, ಮ). ೧೧ ಯ್ಚು (ಅ).

ಇರಿಸಲ್ಕದಂ ಕೊಂಡು ಮೌನದಿಂದಿರ್ಪರು
ಹಿರಿಯರೀ ಪಾತ್ರೆಯಂ ನುಂಗಿಕೊಂಡಿರ್ದಪರು
[೧]ಈ ಪರಿಯು[೧] ಪೊಸತು ನಿಸ್ಸೀಮರಂ ನೋಡಿರೇ
[೨]ಭಾಪುರೇ[೨] ಸಾಧುಗ[೩]ಳಿರಾ ಪಾತ್ರೆಯೀಯಿರೇ[೩]
ಇಲ್ಲಿ ಪುರದೊಳಗಿವರು ಹಿರಿಯರೇನಲ್ಲರೇ
ಅಲ್ಲ[೪]ದಿರೆಯೆ[೪]ಮ್ಮ ಪಾತ್ರೆಯ ಕೊಳಲ್ ಬಲ್ಲರೇ
ಉಂಟುಂಟವರೆ ಭಕ್ತರಿವರೆ ಪಿರಿಯರ್ಘರೆಗೆ
[೫]ಉಂಟುಂಟವರೆ ಮಾನ್ಯರಾಗಿರರೆ ನಿಮ್ಮೊಳಗೆ[೫]

ಎನೆ ಕೇಳ್ದು ಸಭೆ [೬]ಠಕ್ಕುಕವಿದಂತೆ ನೋಡುತಿರೆ[೬]
ತನತನಗೆ ಬೆಱಗಾಗಿ ಮರವಟ್ಟು ಕೇಳುತಿರೆ
ನೆನೆದು ತಿರುನೀಲಕಂಠರು [೭]ಮುಮ್ಮಲಂ[೭] ಮಱುಗಿ
ಮನದೊಳಗೆ ಸಾವುತಂ ಪುಟ್ಟುತಂ ಮಿಗೆ ಮಱುಗಿ
ಇಂತಪ್ಪ ಸಭೆಗೆ ಕೊರಲುಬ್ಬಸವಿವರು ನೋಡ[೮]
ಇಂತಪ್ಪುದಿಂದೆನ್ನ ಕೆಟ್ಟ ಕೇಡಂ ನೋಡ[೮]

ಎಂದು ಚಿಂತಿಸುತಿರಲು ಸಭೆ ನೀಲಕಂಠರಂ
ಬಂದು ಬೆಸಗೊಳುತಿರ್ದರಾ ಗಂಡಹೆಂಡಿರಂ
ಇರ್ದಿರ್ದಿದೆಂತು ಸಿಲ್ಕಿದಿರೆಲೆ ಮರುಳ್ಗಳಿರ
ಇರ್ದ ಪರಿಯಂ ಪೇಳಿ[೯]ರೇ ನಮಗೆ ಭಕ್ತರಿರ[೯]
ಇವರೇಕೆ ನೀವೇಕೆ ಪಾತ್ರೆಯೋ[೧೦]ಕಕಟ[೧೦]ಕಟ
ಇವರ ತೊಡಕಿಂದೆ ಲಘುವಾಗಲೇಕಕಟಕಟ

ಎಂದು ಕೇಳಲ್ಕವರು ಕಣ್ಣನೀರಂ ತೀವಿ
ಇಂದಿಂತುಟಪ್ಪುದಿದು ತಪ್ಪದೆಮಗಿದು ಭಾವಿ

---

೧ ಇಪ್ಪ ಪರಿ (ಬ), ಈ ಪರಿಯೆ (ಮ). ೨ ತಪ್ಪದಾ (ಬ). ೩ ಳೆ ಪಾತ್ರೆಯಂ ನೀಡಿರೆ (ಮ). ೪ ದಿಂತೆ (ಬ). ೫ ಎಂಟಿರ್ದೆಯುವನ ತಾವು ಗೆಲಬಲ್ಲರಿಳೆಯೊಳಗೆ (ಬ). ೬ ತಱುಬಡಂತೆ ನೋಡುತ್ತವಿ:ರೆ (ಬ) ೭ ಮುಮ್ಮಲಂ (ಬ, ಮ) ೮ ಡಿ (ಬ), ಡೆ (ಮ). ೯ ರೆಮಗೆಲೆ ಮರುಳ್ಗಳಿರ (ಬ, ಮ). ೧೦ ಕಿಂತ (ಬ, ಮ).

ಇರಿಸಿತುಂಟಾ ಪಾತ್ರೆ ಕೆಟ್ಟುದುಂಟೆಮು ದಿಟಂ
ಪರಿಹರಿಸಿಕೊ[1]ಳುವೆ[1]ವಾವೆಂಬುದೆಮಗಟಮಟಂ
ಇದಕಿನ್ನಿವರ ಕರುಣವೇ ಹರಣವಿನ್ನೆಮಗೆ
ಇದಕೆ ನುಡಿಯುನ್ನಿಲ್ಲ ಮೋನವೇ ಶರಣೆಮಗೆ
ಧರೆಯುಱಿಯೆ ಪುಸಿವ[2]ರಾವೇ ಇವರ್ಗೆ ಪುಸಿಯಿಲ್ಲ
ಪಿರಿದು[3] ಮಾತೇಕೆ ಸಿಲುಕಿದೆವೆಮಗೊಡೆಯರಿಲ್ಲ
ಅವ[4]ರಾವುದಂ ಮಾಡಿತಕ್ಕಾವೆ[4] ಭಾಜನಂ
ಅವರಂ ನಿರೋಧಿಪ್ಪುದಿನ್ನ ಪ್ರಯೋಜನಂ
ಮಾಱುವೋದೆವು ಪಾತ್ರೆಗಾವಿಬ್ಬರುಂ ನೋಡ
ಬೇಱೆ ಗತಿಯಿಲ್ಲ ನಿಮಗೆಮ್ಮ ಹಂಬಲು ಬೇಡ
ನೀವೆಲ್ಲ [5]ಮನೆಗೆ[5] ಬಿಜಯಂಗೆಯ್ವುದೆಂದೆನಲು
ನಾವವರ್ಮಾಡಿದಂತಾದಪ್ಪೆವೆಂದೆನಲು

ಅಂತ[6]ದಂ ಕೇಳ್ದು ಸಭೆ ಮಱುಗಿ ಮುಮ್ಮಳಿಗೊಂಡು
[7]ಮುಂತೊಂದ[7]ನಾಳೋಚಿಸಿದರಚ್ಚಿ[8]ಗಂಗೊಂಡು
ಮೆಯ್ಯಲೊಂದೊಂದು ಹೊನ್ನಂ ಬಿಟ್ಟು ಪಾತ್ರೆಯಂ
ಅಯ್ಯಂಗೆ ಕುಡುವುದೊಲವಿಂ ಹೊನ್ನ ಪಾತ್ರೆಯಂ
ಎಂದು ತಮ್ಮೊಳು ವಿಚಾರಿಸುತೆಲ್ಲರುಂ ಬಂದು
ಎಂದರಾ ಕ್ರೂರ ಭಕ್ತಂಗೆ ಮನಮಂತಂದು
ಸಭೆ ಗುರುಗಳಂ ಕರೆದು ಪೇಳ್ವೆವೊಂದಂ ನಿಮಗೆ
ಅಭಯಮಂ ಕರುಣಿಪುದು ದಯೆಯಿಂದೆ ನೀವೆಮಗೆ
ಮುಚ್ಚಾಸಿರದ [9]ಒಂದು ಹೊನ್ನ ಹೊಸಪಾತ್ರೆಯಂ
ಇಚ್ಛೆಯಂ ಬಟ್ಟು ಕೈಕೊಂಬುದೀ ಪಾತ್ರೆಯಂ
ಎನೆ ಧಗಿಲುಭುಗಿಲೆನುತೆ ಮಾಮಸಕದಿಂ ಮಸಗಿ
ತೊನೆದು ಬಸುಱಿಂ ಹೊಸೆದು ಹೊ[10]ಯ್ದು ನೆಲನಂ ತಿರುಗಿ
ಅಕ್ಕಟಾ ಪುಣ್ಯಪಾಪ[11]ದ ಹೊಲಬನಱಿಯಿರೇ
ಚಿಕ್ಕನಂತರವಱಿಯದೀ ನುಡಿಯ [12]ನುಡಿವರೇ[12]

---

೧ ಳ್ಳ (ಮ, ಖ). ೨ ಕ (ವಿ). ೩ ಯ (ಬ). ೪ ರೇನುವುಂ ಮಾಡಲದಕಾವೆ (ಮ). ೫ ಮಠಕೆ (ಬ). ೬ ದ (ಮ). ೭ ಬಂದೋದ (ಬ), ಒಂದೊಂದ (ಮ). ೮ ಚ್ಚು (ಮ). ೯ ದೊ (ಬ). ೧೦ ಹಾ (ಮ). ೧೧ ತ್ರ (ಬ) ೧೨ ನಂಬಿರೆ (ಮ).

ಒಡಲಪ್ಪುದುಸುರಪ್ಪುದಾಯುವಪ್ಪುದು ಪಾತ್ರೆ
ತೊಡವಪ್ಪುದೆಮಗೆ ತವನಿಧಿಯುಪ್ಪುದಾ ಪಾತ್ರೆ
ನೆನೆಯದಿರ್ದುದ ನೀವುದೇನೆಲ್ಲವಂ ಪಾತ್ರೆ
ನೆನೆದುದಪ್ಪುದು ನುಡಿದುದಂ ಕೊಡುವುದಾ ಪಾತ್ರೆ
ಅದಕೆ ಹೊನ್ನಂಗಿನ್ನು [೧]ಸರಿಯೆ ಬೇಡಾ ಮಾತು[೧]
ಅದಕೆ ಪರುಸಂಗಿರುಸ ಓಹೊ ಬೇಡಾ ಮಾತು
ಅದಕೆ ಚಿಂತಾಮಣಿ[೨]ಯೆ ಮಱೆದೆಂದೆನಾ[೨]ಮಾತು
ಅದಕೆ ಮೇರು[೩]ವೆ ಶಿವಶಿವಾಃಡೆಸಿನ್ನಾ[೩] ಮಾತು
ಏನೆಂಬೆನಿವರೆನ್ನ[೪]ಸಱಿದಱಿದು ಕಳುವುದಂ[೪]
ಮೋನದಿಂ[೫]ದಿರ್ದೆ[೫]ನ್ನ ಪಾತ್ರೆ[೬]ಯಂ ಕೊಂಬುದಂ[೬]
ದಿಟಭಕ್ತರಂತೆ ಸುಮ್ಮನೆ ಕುಳ್ಳಿತಿರ್ದಪರು
ಕಟಮಟವನೆನ್ನ ಮೇಲಿಟ್ಟುಸುರದಿರ್ದಪರು
ಪಾಪಕರ್ಮರು ನುಡಿಯಿರೇ ನುಡಿಯಿರೇಯೆನುತೆ
ಕೋಪದಿಂ ಕೊನೆಮೊಸೆ ಕೆತ್ತೆ ಮುಳಿದೇಳುತ್ತೆ
ಹರಿದು ಬಂದೊದೆಯಲವ್ವಳಿಸಿ ಹಱಸಾರುತ್ತೆ[೭]
ತರಹರಿಸಿ ನಿಂದಿ[೮]ರದೆ[೮] ಬಿದ್ದು ಮತ್ತೇಳುತ್ತೆ[೯]

ಬಡಿವಂತೆ [೧೦]ಸೋಂಕಿ[೧೦] ಪುಳಕಿಸುತಿರ್ಪನಡಿಗಡಿಗೆ
ಹೊಡೆವಂತೆ [೧೧]ಮುಟ್ಟಿ[೧೧] ಹಿಗ್ಗುತ್ತಿರ್ಪನಡಿಗಡಿಗೆ
ಕಟ್ಟೆಯಿಂದಿಳಿದೇಱಿ ಕೈಯೆತ್ತಿ ಶಾಪಿಸುತೆ
ಕೆಟ್ಟೆನಿವರಿಂದೆನುತೆ ಕೈನೀಡಿ ಕೋಪಿಸುತೆ
ಕೊಱವಂತೆ ಘೂರ್ಮಿಸುತೆ ಕೆಕ್ಕಳಿಸಿ ನೋಡುತ್ತೆ[೧೨]
ಗೆಲುವಂದವಿಲ್ಲಿವರನೆಂಬಂತೆ ನೋಡುತ್ತೆ[೧೨]
ಹಳಹಳಿಸಿ ಹಲುಬುತಾ[೧೩] ಪಾತ್ರೆಯಂ ಕರೆವುತಂ
ಕಳವಳಿಸಿ ಪಾತ್ರೆ ಪಾತ್ರೇಯೆಂದು [೧೪]ಕೂಗುತಂ[೧೪]

---

೧ ಸರಿಗೆಂಬರೇಮಾತು (ಅ), ಸರಿಯೇ ಇದೇವಾತು (ಬ, ಮ). ೨ ಯು ಸರಿಯೆ ದಲ್ಮೇಣ್ (ಮ). ೩ ವು ಸರಿಯೆ ಶಿವ ಶಿವೇಕಾ (ಮ). ೪ ಸಿಱಿದಿಱಿದು ಸುಡುವುದಂ (ಬ), ನಱಿಯದಂತಿರ್ಪುದಂ (ಮ). ೫ ಡೆ (ಮ). ೬ ಯನರಿದು ಕಳೆವುವಂ (ಮ), ಯಂ ಕಳುವುವಂ (ಬ). ೭ ರುತಂ (ಬ, ಹ). ೮ ರುತ (ಬ, ಮ). ೯ ತಂ (ಬ, ಹ). ೧೦ ಮುಟ್ಟಿ (ಮ). ೧೧ ಸೋಂಕಿ (ಮ). ೧೨ ತಂ (ಬ). ೧೩ ತ್ರೆ (ಆ, ದ). ೧೪ ಕರೆವುತಂ (ದ), ನುಡಿವುತಂ (ಅ, ಬ).

ಇರೆ ಕಂಡು [೧]ಸಭೆ[೧] ನಮು[೨]ಗಿದರಿದರಿದು[೩] ತಿದ್ದುವೊಡೆ
[೪]ಹರನೆ ಬಲ್ಲಂ[೪] ನಮ್ಮ ವಶವಲ್ಲ[೫] ತಿದ್ದುವೊಡೆ
ಗುರುಗಳ[೬]ದು ತಪ್ಪಲ್ಲ[೬] ಕೊಂಬವರ್ಗಳಿವರಲ್ಲ
ಇರಿಸೆ ಕೆಟ್ಟುದು ಪಾತ್ರೆಯಿಂದು[೭] ತೀವಡಳವಲ್ಲ
ದೇವರೇ ಬಲ್ಲರಿದನಾವಱಿ[೮]ಯೆವಲಘಟಿತಂ
ಆವರ್ಥದಿಂ ತಿಳಿಯಬಾರದತ್ಯೂರ್ಜಿತಂ

ಎಂದು ನುಡಿಯಲು ಬೇಸಱಿಸಲಾಗದಿನ್ನೆಂದು
[೯]ಅಂದು[೯] ಗುರುಗಳ್ಮನದೊಳೊಂದು ತೆಱನಂ ನೆನೆದು
ಬಯ್ದಡಂ ಬಡಿದಡಂ [೧೦]ಹೇಳದ[೧೦] ಚಲಿಗಳಿವರು
ಕೊಯ್ದಡಂ ಕೊಱೆದಡಂ ಕೊಂಡೆವೆನ್ನದರಿವರು
ಇನ್ನೇ[೧೧]ನನೆಂದಪ್ಪೆ ಇವ[೧೧]ರೊಡನೆ ಪೇಳಿರೇ
ಇನ್ನಿದೊಂದಂ ಮಾಡಲಾರ್ಪರೇ ಕೇ[೧೨]ಳಿರೇ
ಆನೆ ಸೋಲ್ತಪೆನಿವರೆ ಗೆಲು[೧೩]ಗೆ ಎನ[೧೩]ಗುತ್ತರಂ
ಆನೆಯುಂ[೧೪]ಜಿದಪೆನಿವರೊಡನೇಕೆ[೧೪] ಮಚ್ಚರಂ
ದೈವಪಱಿದಪ್ಪುದಱಿದಪುದು ತಮ್ಮರಸಿಯರ
ಕೈವಿಡಿದು ಕೊಂಡದೊಳು ಮುಳುಗಿಯೀ ನೆರೆಪವರ
ಮುಂತೆ ಸೂರುಳ[೧೫] ತಡೆದು ಸಾಲ್ಗೆಂದು ನುಡಿವುತಿರೆ
ಸಂತಸದೆ ಸಭೆ ಮೆಚ್ಚಿ ಲೇಸಾಯ್ತೆನುತ್ತಮಿರೆ

ಕೇಳ್ದು ತಿರುನೀಲಕಂಠರು ತಮ್ಮನಲಗಿನಿಂ
ಸೀಳ್ದ ತೆಱನಾಗೆ ಸುಜ್ಜನೆ ಸುಯ್ದು ಸಿಗ್ಗಿನಿಂ
[೧೬]ಕಯ್ಯಂ ಪಿಡಿಯ[೧೬] ವೇಳ್ದನೆಂತು ಮಾಡುವೆನಿದಂ
ಅಯ್ಯ ಭಕ್ತಂ ನೋಡ ಬಯ[೧೭]ಲಿಗಿ[೧೭]ಕ್ಕಿದನಿದಂ

---

೧ ಗ (ಬ). ೨ ಡು (ಮ). ೩ ದಿದಂ (ಬ). ೪ ಪರಿ ಬೇಱಿಕೆ (ಮ). ೫ ವಿವ (ಮ). ೬ ಲಿ ತಪ್ಪಿಲ್ಲ (ಮ). ೭ ದ (ಅ). ೮ ಯಲ (ಬ). ೯ ಸಿಂದು (ಬ), ಸಿಂದ (ಮ). ೧೦ ಹೊರದ (ಬ). ೧೧ ನೆನಲ್ಪರ್ಪುದಿವ (ಮ), ನನೆಂದಪುದು ಇವ (ಬ), ನನೆಂದಪ್ಪುದಿವ (ಅ). ೧೨ ಪೇ (ಮ). ೧೩ ತೆ ನವ (ಬ). ೧೪ ಜುವೆನಿವರೊಳೇಕೆನಗೆ (ಮ). ೧೫ ಳೆ (ಬ). ೧೬ ಕಯ್ಯಪಿಡಿಯಲ್ (ಮ), ಕಯ್ಯಪಿಡಿಯಂ (ಬ). ೧೭ ಲೊಳಿ (ಬ).

ಎಂತುಸು[೧]ರದಿರ್ಪೆನಿನ್ನೆಂತು ಪೇಳುವೆನಿದಂ[೧]
ಎಂತು ಮಾಡುವೆನೆಂ[೨]ತು ಬಯ್ತಿಡುವೆ [೩]ನಾನಿದಂ[೩]
ಪಿಡಿಯಬಾರದು [೪]ಪಿಡಿಯದುದು[೪] ಪೇಳ್ದಡದು ಡಂಬು
ನಡೆತಂದು ಮಂಟಪದ ನಡು[೫]ವೆ ಪೇಳ್ವುದು[೫] ಡಂಬು
ಇರಲಿರಲಿದೇನಾಯ್ತು ದೇನ [೬]ನೆನೆದ[೬]ಪೆನೆಂದು
ಹರಭಕ್ತನೆನಗೆ ಗಸಣಿಯನು ಮಾಡಿದನೆಂದು
ಕಳ್ಳ[೭]ನಿವನೆಂದೆನಲಿ[೭] ಕಡುಪಾ[೮]ಪಿಯೆಂದೆನಲಿ[೮]
ಬಳ್ಳಿಹು[೯]ಸಿಕಂ ಬಱಿಯ ಕೋಪಿಯಿವನೆಂ[೧೦]ದೆನಲಿ[೧೦]
ಶಿವಭಕ್ತಿಡಂಬನೆಂದೆಣಿಸಲಾಱೆಂ ಶಿವನೆ
ಭ[೧೧]ವನೆ ನಿನ್ನಾಣೆ[೧೨]ಯಂ [೧೩]ಪೇಳೆ[೧೩]ಲಾರ್ಪೆನೆ ಹರನೆ
ತೋಱುವೆನೆ ಬೀ[೧೪]ಱುವೆನೆ [೧೫]ಎನ್ನೊಡೆಯ[೧೫]ನಾಜ್ಞೆಯಂ
ದೂ[೧೬]ಱುವೆನೆ ಸಾಱುವೆನೆ [೧೭]ಎನ್ನಶಿವ[೧೭]ನಾಜ್ಞೆಯಂ
ಇದಱಿಂದೆ ಬೆಂದಡೇಂ ಇದಱಿಂದೆ ನೊಂದಡೇಂ
ಇದಱಿಂದವ[೧೮]ಳಿದಡೇಂ ಇದಱಿಂದ[೧೯]ವುಳಿದಡೇಂ[೧೯]
ಇನ್ನೇವೆನಿನ್ನೇವೆನಯ್ಯೋ ಮಹಾದೇವ
ಇನ್ನೇನನೆಂದಪೆಂ ಕರುಣಿಸು ಮಹಾದೇವ
ಇರ್ದಿರ್ದ ದೃಶ್ಯವಾಗೆನೆ ಭಸ್ಮವಾಗೆನೇ
ಇರ್ದನೆಲನೊಳಕೊಳ್ಳದೇ ಜೀರ್ಣವಾಗೆನೇ
ಏಕೆ ಶಿವನಿನಿತು ದಿನವಿರಿಸಿದಂ ತಾನೆನ್ನ
ಏಕೆ ತೋಱಿಸಿದನೀ ಭಕ್ತಂಗೆ ಹರನೆನ್ನ

ಎಂದು ತಿರುನೀಲಕಂಠರು ನೋವುತೊಳಗೊಳಗೆ
ಬೆಂದ ನುಲಿಯಂತೆ ಬಱಿ[೨೦]ಯಾಕಾರದಿಂ ತೊಳಗೆ[೨೦]

---

೧ ರಿದಪೆನಿನ್ನಿದೆಂತು ಪೇಳ್ದಪೆನಿದಂ (ಬ). ರಿದಪೆನಿನ್ನೆಂತು ಪೇಳ್ದಪೆನಿದಂ (ಮ). ೨ ಸಿಂ (ಬ). ೩ ಸಿಂತಿದಂ (ಬ, ಮ). ೪ ಬಾರದೊಡೆ (ಅ). ೫ ವಿಪ್ರರ್ಗಿಡಿದು (ಮ). ೬ ನೆಂದ (ಮ). ೭ ನೆಂದೆಂಗೆ (ಅ, ಬ, ಹ, ದ). ೮ ಯಿವನೆಂದೆಂಗೆ (ಅ, ಬ, ಹ, ದ). ೯ ವು(ಬ). ೧೦ ದೆಂಗೆ (ಬ). ೧೧ ಶಿ (ಬ). ೧೨ ಜ್ಞೆ (ಬ). ೧೩ ವಿಗಾಜಿ (ಅ, ದ). ೧೪ ವಿಾ (ಮ). ೧೫ ಎನ್ನಶಿವ (ಮ) ೧೬ ಬೀ (ಮ) ೧೭ ಎನ್ನೊಡೆಯ (ಮ). ೧೮ ಲ (ಬ, ಮ). ೧೯ ಲುಳಿದಡೇಂ (ಬ), ಸತ್ತಡೇಂ (ಮ). ೨೦ ಯಾಕಾರದಂತಾಗೆ (ಮ, ಕಾಯದಿಂ ತೊಳತೊಳಗೆ (ಬ).

ಅದನಱಿಯದಾಗಳಾ ಸಭೆ ಸಂತಸಂಬಟ್ಟು
ಮುದದಿಂದೆ ಶೀರಿತೆಂದೇ ಬಗೆದು ಮು[೧]ಯ್ವಿಟ್ಟು
ಕರೆದು ತಿರುನೀಲಕಂಠರ್ಗೆ ನಿಮ್ಮರಸಿಯರ
ಕರವಂ ಪಿಡಿದು ಕೊಂಡದೊಳಗೆ ಮುಳುಗಲ್ಕಿವರ
ತೊಡಕು [೨]ತೀರ್ದಪು[೨]ದೇಳಿಯೆಳಿಯೆಂದೆನಲಂದು
ಪಿಡಿ[೩]ಪಟ್ಟ[೩] ತೆಱದೆ ತಿರುನೀಲಕಂಠರು ನೊಂದು
ಪೇಳಬಾರದು ಪೇಳದಿರಬಾರ[೪]ದಿನ್ನೆಂದು[೪]
ಆಳಿ[೫]ಗೊಳಗಾ[೫]ಯಿತೆನ್ನ[೬]ಯ ಭಕ್ತಿ ಧರೆಗೆಂದು[೬]
ಹಱಲೆಯೊಳು ತಂದಿಕ್ಕಿತೆನ್ನ ಡಂಬಿನ ಭಕ್ತಿ
ಮೊಱೆಯಿಡಿಸಿತಿಂತಿವರನೆನ್ನ [೭]ಟೊಳ್ಳಿನ[೭] ಭಕ್ತಿ
ರಚ್ಚೆಗಂ ಬೀದಿಗಂ ಬರಿಸಿತೆನ್ನಯ ಭಕ್ತಿ
ಅಚ್ಚಿಗಂಗೊಳಿಸಿ [೮]ತಡವಡಿಸಿ[೮]ತೆನ್ನಯ ಭಕ್ತಿ

ಎಂದು ಚಿಂತಿಸುತೆ ಮನದೊಳಗೆ ಜಗ್ಗನೆ ಜಱಿದು
ನೊಂದು ಬೆದಬೆದ ಬೆಂದು ಕಂದಿ ಮಿಗೆ ಮೈಗಱಿದು
ನುಡಿವಕ್ಕರಂಗಳೊಳಗುಸುರಳಿವ ಮಾಳ್ಕೆಯಿಂ
ನುಡಿದನೆಂತಕ್ಕೆ ದಂಡಿಸಲುಸುರ್ವ ಮಾಳ್ಕೆಯಿಂ
ಪಿಡಿಯೆನೆ[೯]ನ್ನಯ[೯] ಸತಿಯ ಕೈಯನೇನಾದಡಂ
ಪಿಡಿಯೆನೀ ಧರೆ ಮೇಲೆ ಕೆಡೆದಡಂ ಸತ್ತಡಂ
ಪಿಡಿಯೆಂ ಪಿಡಿಯೆನೆಂಬ ನುಡಿಗೇಳ್ದು ದೇವಸಭೆ
ಪೊಡವಿಗಿದು ಪೊಸತು ಪೊಸತೆನುತಲಾ ಶರಣಸಭೆ
ನೋಡುತಿರಲೆದ್ದು[೧೦] ಗುರುಗಳು ನಗುತೆ ತಲೆದೂಗಿ
ಆಡತೊಡಗಿದನಟ್ಟಹಾಸದಿಂದಂ ಮಸಗಿ

ಬಂದುದೆನ್ನಯ ಪಾತ್ರೆ ಚಿಂತೆ[೧೧]ಯೇಕೆ[೧೧]ನ್ನಿಮಗೆ
ಒಂದುವಂ ಪೇಳದಿರಿ ಸಭೆಗಳಿರ ನೀವೆಮಗೆ

---

೧ ಮೆ (ಬ,ಮ). ೨ ತಿದ್ದುವು (ಅ,ದ). ೩ ವೆತ್ತ (ಮ). ೪ ದೆಂದುನುತೆ (ಬ,ಮ). ೫ ಗೋಲಾ (ಅ,ದ). ೬ ಭಕ್ತಿಧಾರುಣಿಗೆನುತೆ (ಬ, ಮ). ೭ ಮಹಿಮೆಯ (ಅ,ಬ). ೮ ತಳವಳಿಸಿ (ಮ), ಕಳವಳಿಸಿ (ಬ). ೯ ನ್ನಾ (ಮ). ೧೦ ಳ್ದು (ಮ). ೧೧ ಬೇಡಿ (ಬ,ಮ).

[1]ಕಯ್ಯಂ ಪಿಡಿಯದ[1]ವರು ಪಾತ್ರೆಯಂ ಕೊಟ್ಟಪರು[2]
ಅಯ್ಯಯ್ಯ ಗಹಗಹಿಸುತಾವನೆಂದಿರ್ದ[3]ಪರು[3]
ಎಂದೆನುತ್ತವರ ಹತ್ತಿರೆ ಹೋಗಿ ನಡೆ ನೋಡಿ
ಮುಂದೆ ಕುಣಿವುತೆ ಬಾಯ್ಗೆ ಬಂದ ಕಟಕಿಯನಾಡಿ
[4]ಏನೆನ್ನದಿಂತೆದ್ದು[4] ಕೈಗಳಂ ಪಿಡಿಯಿ[5]ರೇ
[6]ಏನಿರ್ವರೀ ನೆಲದೊಳಿರ್ದುದಂ ನುಡಿಯಿರೇ[6]
ಪಿಡಿಯಿರೇ ಕೈಯನಕ್ಕಕ್ಕುಬ್ಬಟೆಯ ಭಕ್ತಿ
ಪಿಡಿಯಿರೇ ಎ[7]ನಿತು ಕಾಲದೊಳಿಂತಿದತ್ಯುಕ್ತಿ
ಇವರೆ ಕೊಂಡಲರು ಸಂದೆಗರ್[8]ಂ ಬೇಡ ಪಾತ್ರೆಯಂ
ಇವರ ಕೈಯೊಳಗಱಿಸಿಕೊಂಬೆನಾ ಪಾತ್ರೆಯಂ
ಹರಿಯುವಿದು ಸುಡಿ[9]ಂವುದಿದು[10]ಂ ಕೇಳ್ದಿರೇ ಕೇಳ್ದಿರೇ
ಇರವಿ[11]ದಾಡುವ ಮಾತು ಅಱಿದಿರೇ ಅಱಿದಿರೇ
ಕಯ್ಯಂ ಪಿಡಿಯೆವೆಂಬ ನುಡಿಯಂತೆ ಪಾತ್ರೆಯಂ
ಅಯ್ಯಯ್ಯ[12] ಕೊಳ್ಳೆವೆಂಬೀ ನುಡಿ ಧರಿತ್ರಿಯಂ
ಠಕ್ಕಿಕ್ಕದೇ ಇವರ ನುಡಿ ಸತ್ಯದಂದದಿಂ
ಮಿಕ್ಕವರ್ಮರುಳಾಗರೇ ಇವರ ವೇಷದಿಂ
ಆನೊರ್ಬನಱಿದೆನಿವರಿಂತಿಂತು ಮಾಳ್ಪುದಂ
ಆನಲ್ಲದಾರ್ಬಲ್ಲರೇ ಇವರ್ಗಳಿರ್ಪುದಂ
ಕವಿಲೆಯಾ[13]ಕಾರದ ಹುಲಿಯ ಚರಿತ[13]ವಯ್ಯಯ್ಯ
ಭುವನಕ್ಕೆ ಪೊಸತು ನಿಮ್ಮರ್ಬರಿರವಯ್ಯಯ್ಯ
ಇಂತಿರ್ದಡಂ [14]ಹೋಹುದೇ ಪಾತ್ರೆ ಭಕ್ತರಿ[14]
ಇಂತಿಂತು ಗಂಟಂಲಿಂದಿಳಿವುದೇ [15]ಶರಣ[15]ರಿರ
ಸತ್ಯಶರಣರು ನೀವು ಉಂಟುಂಟು ತಪ್ಪುವುದೆ
ಅತ್ಯಾಶೆ ಮತ್ತೆ ಕೆಲಬ[16]ರ್ಗಿನ್ನು[16] ಒಪ್ಪುವುದೆ

ಎನುತವಾಕ್ಷೇಪಿ[17]ಸುತ್ತಂ ನಿಂದಿಸುತ್ತೆ[17] ಮಿಗೆ
ಕೊನೆಮೀಸೆ ಕತ್ತೆ ಕಣ್ಕೆಂಪೇಱೆ ಕೈ ನಡುಗೆ

---

೧ ಕಯ್ಯ ಪಿಡಿಯದವಡ (ಮ). ೨ ರೆ (ಅ,ದ). ೩ ಪಿರೆ (ಅ,ದ). ೪ ಏನೇನದೆಂತೆಂತು (ಮ). ೫ ಯು (ಮ). ೬ ಏನು ಸೀವಿರ್ದು ನೆಲದೊಳು ಇಂತು ನುಡಿವರೆ (ಬ, ಮ). ೭ ಇ ಮು). ೮ +ವ (ಮ). ೯ ಗ (ಮ), ಹಂ (ಬ). ೧೦ ವಡಿಪು (ಅ) ೧೧. ಲಿ (ಮ). ೧೨ ಯ್ಯೊ (ಮ) ೧೩ ಕಾರ ಹುಲಿಯಾಚರಣ (ದ). ೧೪ ಪಾತ್ರೆ, ಬಿಡುವೆನೇ ಕಪಟರಿರ(ಮ) ೧೫ ಭಕ್ತ (ಬ,ಮ). ೧೬ ಗಿ೯ಂತು (ಬ,ಮ). ೧೭ ಸುತಲೆದ್ದು ನಿಂದಿದ್ದು (ಬ,ಮ).

ಕೈ ನೋಯೆ ೧ಬಡಿದು೧ ಮುಟ್ಟುತೆ ೨ಹೆಚ್ಚಿ ಹಿಗ್ಗುತಂ೨
ಮೈ ನೋಯಲೊಡೆದು ಸೋಂಕುತೆ ಹೊಂಗಿ ಹೊಗಳುತಂ
ಇರ್ಪ ಭಕ್ತನ ಕೋಪದತ್ಯುಗ್ರಮಂ ಕಂಡು
ಕೊ೩ಪುರ್ಡು೩ಗದಿಂದುಧರನಾಜ್ಞೆಯಂ ಕೈಕೊಂಡು
ಏನೆಂದಡಂ ಹಸಾದಂ ದೇವ ಎನುತಿರ್ಪ
ಏನೆಂದಡಂ ದೇವ ಕರುಣಿಸೆಂದೆನುತಿರ್ಪ
ಒಡೆಯಲೆಂದವ್ವಳಿಸೆ ಮೈಯ೪ನೊಲಿದೊ೪ಡ್ಡುವಂ
ಪಡೆದು ಬಯ್ದಡೆ ನಲಿನಲಿದು ಕಿವಿಯನಾನುವಂ
ನಿಂದಿಸಿದಡದುವೆ ತೊಡವೆಂದು ಮೆಯ್ವೆಚ್ಚುವಂ
ಬಂದು ಬಡಿಯಲ್ಪುಳಕವೃಂದಮಂ ಧರಿಸುವಂ
ಪರಿಭವಂಬಡಿ೫ಸಿದಡೆ ೬ಹರನೊಲ೬ವಿದೆಂದೆಂಬ
ಉರವಣಿಸಿ ನುಡಿದಡದು ಪರಮಸುಖವೆಂದೆಂಬ
ಇಂತು ಭಕ್ತರ ದೇವನಾಸಂದಲೀಲೆಗಂ
೭ಎಂತುಮಂ೭ ಸಭೆಯಱಿಯದೀಶ್ವರನ ಮಾಯೆಗಂ
ಬೇಸತ್ತು ನಮಗಿದರಿದರಿದು ನಮ್ಮಳವಲ್ಲ
ಆಸುರದ ತೊಡಕಿದು ಬಿಡಿಸಬಲ್ಲವರಿಲ್ಲ

ಎನುತೇಳಲುದ್ಯುಕ್ತರಾಗೆ ಶಂಕರನಱಿದು
ಎನಗಿವರ೮ನಾವಂದದಿಂ ಗೆಲುವುದಿನ್ನರಿದು೮
ಸಾ೯ಲ್ವುದಿನ್ನಿವರಂ ಸಿರೋಧಿಸ೧೦ಲದೇ೧೦ಕೆಂದು
ಸೋಲ್ವ೧೧ರಲ್ಲಿಂತಿವರು ನಿಷ್ಠೆಯುಳ್ಳವರೆಂದು
ಒಂ೧೨ದೊಂದು ಮಾ೧೩ತನೆಂದಂ ಸದಾಶಿವನಂದು೧೩
ಹಿಂದಣ ನುಡಿಗಳೇಕೆ ನಿಮ್ಮ ಮುಂದೊಲಿದಿಂ೧೪ದು
ಕಯ್ಯಂ ಪಿಡಿಯೆನೆಂಬ ಶುಚಿತನವದಂತಿರ್ಕೆ
ಮೆಯ್ಯ ಸೋಂಕೆನುವೆಂಬ ಪೆ೧೫ಬರ್ಸಿಯದಂತಿರ್ಕೆ
ಈ ಲಾತಕೋಲಿನೆರಡುಂ ದೆಸೆಯೊಳಿರ್ಬರುಂ
ಕೋಲ ತುದಿಯಂ ಪಿಡಿದು ನೋ೧೬ಡೆ ನೀವೆಲ್ಲರುಂ

---

೧ ಬಱಿದೆ (ಬ). ೨ ಹಿಗ್ಗಿ ಹೆಚ್ಚುತಂ (ಬ, ಮ). ೩ ಪರ್ಡ (ಮ). ೪ ಸದಿರೊ (ಬ, ಮ). ೫ ರಿ (ಬ, ಮ, ಹ). ೬ ಕರ ನಲಿ (ಬ). ೭ ಸಂತತಂ (ಬ, ಮ, ಹ). ೮ ಗೆಲುವುದಾವಂದದಿಂದಲು ಅರಿದು (ಮ, ಹ). ೯ ಸೋ (ಮ, ಹ). ೧೦ ಲುಸಾ (ಬ, ಮ, ಹ). ೧೧ ರಂತಿಲ್ಲಿ (ಅ). ೧೨ ಬಂ (ಬ). ೧೩ ತಂ ಸದಾಶಿವಂ ತಾನಂದು (ಅ). ೧೪ ದಂ (ಮ, ಹ). ೧೫ ಹೆ (ಅ). ೧೬ ಕೂ (ಮ, ಹ).

ಕೊಂಡದೊಳು ನಲವಿಂದೆ ಮುಳುಗಿ ಸೂರುಳಲಂ[೧]ದು
ಕೊಂಡಾಡಲೇ[೨]ಕೆ ಇನ್ನಿವರನಾಗಳು ಎಂದು[೨]

ಕೇಳ್ದು ತಡೆವಿಟ್ಟ ತೆಜದಿಂದೆ [೩]ಮೆಯ್ವೆಚ್ಚುತಂ[೩]
ತಾಳ್ದು ಪರಮಾನಂದ[೪]ವಂಕುರಂದೋಱು[೪]ತಂ[೫]
ದಡದಡಿಸುತೆದ್ದು[೬] ತಿರುನೀಲಕಂಠರ್ಬಂದು
ನುಡಿದ[೭]ರಿಂತಿದನೊಡಂಬಟ್ಟೆವಾವಿದನೆಂದು
ಸಂತಸಂ ಕೈಮಿಕ್ಕು ಗಂಡಹೆಂಡಿರು ನಲಿದು
ಕಂತುಹರ ಶರಣೆನುತೆ ಕೋಲ ತುದಿಯಂ ಪಿಡಿದು
ಇರಿಸಿದರಿವರು ಪಾತ್ರೆಯಂ ಕೊಳ್ಳೆವಾವದಂ
ಹರ ನೀನೆ ಬಲ್ಲೆ ತಾನೇನಾದುದೆಂಬುದಂ
ಎನುತಿರ್ಬರುಂ ನಡೆದು ಬಂದು ಕೊಂಡದ [೮]ತಡಿಗೆ[೮]
ನೆನಹವೆರಡಿಲ್ಲ[೯]ದೆ ಮನದೊಳೆ[೧೦]ಂಜಿಗೆ ಹರನಡಿಗೆ
ಜನಿಯಿಸಿದ ಜನನಮಂ ಜಲ[೧೧]ದೊಳು[೧೧] ಕಲಷು[೧೨]ವಂತೆ
ತನುವಿಡಿದ ಜರೆಯನೋವದೆ ತೊಳೆದು ಕಳೆವಂತೆ
ಕೊಂಡದೊಳು ಘಳಿಲನೆ ಮುಳುಂಗಿ ಸಿಂದಿ[೧೩]ರ್ದಿರಲು[೧೩]
ಕಂಡು ಸಭೆ ಕೌತುಕಂಗೊಂಡು ನೋಡು[೧೪]ತ್ತಿರಲು[೧೪]

ಮುನ್ನಿನಂದದೊಳೆ ಹದಿನಾಱು ಹರೆಯವಾಗೆ
ಮುನ್ನಿಂದೆ ಸೂರ್ಮಡಿ ವಿಳಾಸ[೧೫]ವುನ್ನತವಾಗೆ[೧೫]
ಇತ್ತ ಜಗಳದ ಗುರುಗ[೧೬]ಳಾಗ[೧೬] ಮಂಟಪದೊಳಗೆ
ಹೊತ್ತಿರ್ದ [೧೭]ಚೋಹ[೧೭]ಮುಮನಿಳಿಪಿ [೧೮]ನಿಜದೊಳು[೧೮]ತೊಳಗೆ
ಜಡೆ ಚಂದ್ರಕಳೆ ನೊಸಲಕಣ್ ನಾಗಕುಂಡಲಂ
[೧೯]ತೊಡಿಗೆಯುಹಿ ಕಱೆಗೊರಲು ಮಿಸುಪ[೧೯] ಮುಖಮಂಡಲಂ
ಕರಮೊಪ್ಪೆ ರವಿಕೋಟಿತೇಜವಂ ಮಸುಳಿಸುತೆ
ಇರೆ ಕಂಡು ತಿರುನೀಲಕಂಠರುಬ್ಬರಿಸುತ್ತೆ

---

೧ ಲೆಂ (ಬ). ೨ ಕಿವರನಾಗಳುಂ ಎನಲಂದು (ಅ). ೩ ಮುಯ್ಯೆಚ್ಚುತ್ತೆ (ಅ) ೪ ಡಿಂದೆ ಮೈವೆಚ್ಚು (ಹ, ಮ). ೫ ತ್ತೆ (ಬ). ೬ ಳ್ದು (ಅ, ಮ). ೭ ದ (ಅ) ೮ ಕಡೆಗೆ (ಮ,ಹ . ೯ ರ (ಮ). ೧೦ ಳಗೆ (ಮ). ೧೧ ವಂ (ಬ,ಮ,ಹ). ೧೨ ಕು (ಅ). ೧೩ ರ್ದುಮಿರೆ (ಹ,ಮ). ೧೪ ತ್ತುಮಿರೆ (ಹ,ಮ). ೧೫ ಮುಂ ತನಗಾಗೆ (ಅ). ೧೬ ಳಂದು (ಮ,ಹ,ಬ). ೧೭ ವೇಷ (ಬ, ಮ, ಹ). ೧೮ ಮಿಂಗೆ ತೊಳ (ಅ). ೧೯ ಉಡಿಯ ಪುಲಿದೊವಲಕ್ಷಮಾಲೆ (ಅ).

ಪರಿತಂದು ಚರಣತಳದಲ್ಲಿ ಧೊಪ್ಪನೆ ಕೆಡೆದು
ಹರನ ಚರಣಂಗಳಂ ಬಿಗಿಯಪ್ಪುತಂ ಪಿಡಿದು
ದೇವ ನಿನ್ನಂ ಮಱೆಸಿಯೆನ್ನ ನಿಂತಿಱಿ[೧]ವರೇ[೧]
ದೇವ ಈವೊಡಲೊಳಿದ್ದೆನ್ನ ಪುನವಱಿ[೧]ವರೇ[೧]
ಆನೊರ್ಬನೆಂದು ಗಹನಂ ಮಾಡಿ[೨]ಬಪ್ಪುದೇ
[೩]ಏನಯ್ಯ ನೋಡೆನ್ನ ಭಕ್ತಿಯಂತಪ್ಪುದೇ[೩]
*ಈ ಸೌಕುಮಾರ್ಯ[೪]ಮಪ್ಪಂಗರುಚಿಯಂ[೪] ಬಿಟ್ಟು
ಆಸುರದ ನಿಷ್ಠುರದ ಚೋಹಮಂ ಪುಂತಿ[೫]ಟ್ಟು
ಇನಿತು ಬೇಗಂ ನುಡಿದು ಜ[೬]ಡಿದು ನೊಂದೈ ತಂದೆ
ಇನಿತು ಬೇಗಂ ಮುಟ್ಟಿ ಪುಟ್ಟಿ ನೊಂದೈ ತಂದೆ

ಎಂದಿರ್ಬರುಂ ನೊಂದು ಮಱುಗಿ ಮೊಱೆಯಿಡುತಿರಲು
[೭]ಬಂದದಂ[೭] ದೇವಗ[೮]ಣಸಂಬರ[೮]ದೊಳೀಕ್ಷಿಸಲು
ನೆರೆದವು ವಿಮಾನಂಗಳೀಶ್ವರನ ಕೆಲದಲ್ಲಿ
ಸುರಿದವಾನಂದದಿಂ ಹೂಮಳೆಗಳಲ್ಲಲ್ಲಿ
ದುಂದುಭಿ ಮೃದಂಗ ಭೇರೀರವಂಗಳು [೯]ನೆಗಳೆ[೯]
ಬಂದಮರಸಂತತಿಗಳಂದಭವನಂ ಹೊಗಳೆ
ಆಗಳೀಶ್ವರನೊಸೆದು ನಂದೀ[೧೦]ಶನಂ[೧೦] ಕರೆದು
ಏಗೆಯ್ಯರೆನ್ನ ಭಕ್ತರು[೧೧] ನೋಡಿದೊಂದರಿದು
ಹದಿನಾಱು ವರುಷದಂ[೧೨]ದಾಣೆಯಿಡಲೀ ಭಕ್ತಿ[೧೩]
ಅದಿರ[೧೪]ದಿಂದಿನವರೆಗೆ[೧೪] ಮೀಱದಿಹುದತ್ಯುಕ್ತಿ
ಆನೊರೆದೊರೆದು ನೋಡೆ ಸೋಲದವರಿಂ[೧೫]ತುಂಟೆ[೧೫]
ಈ ನೆಲದೊಳಾರುಂ[೧೬]ವಂ ಪೋಲದವರಿಂತುಂಟೆ[೧೬]

---

೧ ಪುದೇ (ಬ). ೨ ಡ (ಅ). ೩ ಆನಾವನೆಂದು ನೀನೆಂತೆಯ್ದಿ ಬರ್ಪುದೆ (ಹ,ಬ,ಮ)
*+ ಆನಾವನೆಂದು ನೀನಿಂತೆಯ್ದಿ ಬರ್ಪುದೇ ॥ ನಾನಾವಿಷಾದಮಂ ನಿಮಗಿಂತು ತಂದುದೇ (ವಿ). ೪ ವೆಸಿಪಂಗಲತೆಯಂ (ಬ,ವಿ), ದಂಗತುಚಿಯಂ ಸಲೆ (ಮ,ಹ). ೫ ದಿ (ಅ,ದ). ೬ ಬ (ಬ,ಮ,ಹ). ೭ ಬಂದು (ಬ,ಹ), ಬಂದ (ಮ), ಬಂದಂದು (ದ). ೮ ಣಂಗಳಂಬರ (ಬ), ಂಗಳುಂ ಣರ (ಮ,ಹ). ೯ ಮೊಳಗೆ (ಬ,ಮ,ಹ). ೧೦ ಶ್ವರನ (ಬ,ಮ,ಹ). ೧೧ ರ (ಬ, ಮ, ಹ). ೧೨ ದಿಂ (ಮ,ಹ). ೧೩ ಕ್ತೆ (ಬ). ೧೪ ದದ ನಿಂದುವರ (ಬ, ಮ, ಹ), ದಂದಿಂಪುವರೆ (ದ). ೧೫ ತಿವರು (ಬ,ಅ,ದ). ೧೬ ವರಿಯದ ತೆರದಿ ಬಾಳ್ದುದುಂಟೆ (ಮ), .......... ಬಾಳ್ದಂಟೆ (ಹ). ... ........ತಿವರು (ಬ,ಅ,ದ).

ಎಂದು ನಂದೀಶಂಗೆ ಕರುಣದಿಂ ಬೆಸಸುತಂ
ಮುಂದಿರ್ದ ತಿರುನೀಲಕಂಠರಂ ನೋಡುತಂ
ಆಣೆ ಬಿಟ್ಟುದು ಬಿಟ್ಟುದಿನ್ನಿನಿತು ವತ್ಸರಂ
ಕ್ಷೋಣೀತಳದೊಳು ಸುಖದಿಂದಿರ್ದನಂತರಂ
ಬನ್ನಿಮೆಂದನಿತು ದಿನವಿರಿಸಿ ಬಳಿಕುತ್ಸವದೆ
ಮನ್ನಿಸುತೆ ತನುವೆರಸಿಂ ಕೊಂಡೊಯ್ದು ಸಂತಸದೆ
ಗಣಪದವಿಯೊಳಗವರನಾನಂದದಿಂದಿರಿಸಿ
ತ್ರಿಣಯನೊ[೨]ಲವಿಂ ತನ್ನ ನೇಹದ ನೆಲೆಯೊಳಿರಿಸಿ
ಭಕ್ತಜನ [೩]ಶುಕ[೩]ನಿಕರ ಪುಣ್ಯಫಲನೊಪ್ಪಿದಂ
ಭಕ್ತಜನ [೪]ಪಿಕಕುಲದ ಪುಣ್ಯದಳ[೪]ನೊಪ್ಪಿದಂ
ಶರಣಕುಲ ಸರಸಿಜಸಹಸ್ರಕರನೊಪ್ಪಿದಂ
ಶರಣಜನ[೫]ಕಲ್ಪತರು ಸುರಧೇನುವೊ[೫]ಪ್ಪಿದಂ
[೬]ಹೆಂಪೆಸೆವಲಂಪಿನ[೬] ಪ್ರಮಥನಿಧಿಯೊಪ್ಪಿದಂ
ಹಂಪೆಯ ವಿರೂಪಾಕ್ಷನನವರತವೊ[೭]ಪ್ಪಿದಂ

*ಸಕಳಜನಂ ಕಾಣುತೆ ಕಾ
ತುಕುವೆನೆ ಮೆಱೆದ ತಿರುನೀಲಕಂಠರ ಸುತನೆಂ ||
ದು ಕರಂ ಭಕ್ತಿಯನೆನಗೀ
ಗಕಳಂಕ ಕೃಪಾಳು ಹಂಪೆಯ ವಿರೂಪಾಕ್ಷಂ ||

## ತಿರುನೀಲಕಂಠದೇವರ ರಗಳೆ ಸಮಾಪ್ತಂ

---

೧ ಸು (ಮ,ಹ). ೨ ನ (ಬ). ೩ ಸುರ (ಅ). ೪ ವತ್ಸಲ ದಯಾರೂಪ (ಅ,ದ), ಪಿಕಕುಲದಯಾಂಕುರ (ಬ), ಪಿಕಕುಲ ದಯಾಕರ (ಮ,ಹ). ೫ ಮನಕಲ್ಪತರುರೂಪನೊ (ಅ, ದ). ೬ ಸಂಪದದ ಸೊಂಪಿನಿಂ (ಬ). ೭ ಲೊ (ಬ, ವ). *ಈ ಪದ್ಯದ ಬದಲು ಹ ಪ್ರತಿಯಲ್ಲಿ ಹರನಾಣೆಯಿಟ್ಟ ತನ್ನಯ। ತರುಣಿಯ ಕೂಟವನೆ ಮಾಣ್ದ ಮಿಗೆ ಗುಪ್ತಮಹೇ॥ ಶ್ವರರ ತಿರುನೀಲಕಂಠರ । ಚರಣವೆ ಶರಣೆನಗೆ ಹಂಪೆಯ ವಿರೂಪಾಕ್ಷ ।। ಈ ಪದ್ಯವಿದೆ.

ಶ್ರೀ

ಕೊಂಡಾಡಿ ಬಣ್ಣಿಸುವೆನು
ದ್ದಂಡಗಣೇಶ್ವರ[೧]ನುಮೆನಿಸಿ ಧರೆಗೆ ಜಸಂ[೧] ಕೈ
ಕೊಂಡಿ[೨]ಲ್ಲಿನ್ನದಿ[೩]ಹ[೩]ಪಗೆ[೩]
ಯಾಂಡರ ಚರಿತ[೪]ವನು[೪] ಹಂಪೆಯ ವಿರೂಪಾಕ್ಷಾ ||

ಶ್ರೀಗಿರಿಜೆಯರಸನೊಪ್ಪುವ ಚೋ[೫]ಳ[೫]ದೇಶದೊಳು
ರಾಗದಿಂದೊರ್ವನಿರ್ಪಂ ಸುಖಾವಾಸದೊಳು
ಕಾವೇರಿಕರೆ[೬]ಪಟ್ಟಣಾಧಿಪತಿಯೊಪ್ಪುವಂ
ದೇವಭಕ್ತರ ನಡುವೆ ಸದ್ಭಕ್ತನೊಪ್ಪುವಂ
ಧರೆಗಿಹ[೩]ಪಗೆಯಾಂಡರೆಂಬ ನಾಮ[೭]ದೊಳೆ[೭]ಸೆದು
ಶರಣಗೆ ಬೇಡಿತ್ತ[೮]ನಿಲ್ಲೆನ್ನದಂತೊಸೆದು
ಕ[೯]ಡುತಲಿರ್ಪಂ ಪರಮ ಹರುಷ[೧೦]ದನುದಿನಂ
ತೊ[೧೦]ಡುತಲಿರ್ಪಂ ಭಕ್ತಿಭೂಷಣವನನುದಿನಂ
ತನ್ನರ್ಥ[೧೧]ಸಂಖ್ಯೆ[೧೧]ಯುಂ ತಾನಜ[೧]ಯನೂರ್ಜಿತಂ
ತನ್ನ ಸಂಪನ್ನತೆ ಕುಬೇರನಿಂ ಶಾಶ್ವತಂ ೧೦
ತನ್ನ ಶಿವಭಕ್ತಿ ಶ[೧೨]ರ್ವನ ಕರುಣದಿಂ ಪಿರಿದು
ತನ್ನುದಾರತೆ ಕರ್ಣ[೧೩]ಶಿಬಿಬಲಿಗಳಿಂ[೧೩] ಪಿರಿದು

ಅಂಗಭೋಗದ ಸತಿಯರಿನ್ನೂರ್ವರಾತಂಗೆ
ಸಿಂಗರಿಸುತಿರ್ಪ ಸತಿಯರು ನೂರ್ವರಾತಂಗೆ
[೧೪]ತನಗ[೧೪]ರಸಿಯರು ನೂರ್ವರಾಗಿರ್ಪರವರೊಳಗೆ
[೧೫]ನನೆಯಂಬಿನಂತಿರ್ಪಳೊರ್ವ ಸತಿ ತನಗೆ ಮಿಗೆ[೧೫]

---

೧ ನ ಧರೆಗೆ ಜಸಪಂ ತಾಂ (ಅ). ೨ಡ (ಮ). ೩ಹಸ್ಸಫೆ (ಆಪ್ರತಿಯ ಪ್ರಯೋಗವೇ ಇದು). ೪ ಮನೆ (ಅ). ೫ ಳು (ಅ). ೬ ರ (ಮ). ೭ ದಿನೆ (ಬ, ಮ, ಪ). ೮ ದುದ (ಅ). ೯ ಕೊ (ಬ, ಮ, ದ). ೧೦ ಕು (ದ). ೧೧ ಶಂಕೆ (ಬ, ಮ, ಹ). ೧೨ ಸ (ಬ). ೧೩ ಬಲಿಗಳಿಂದಂ (ಬ, ಮ, ದ). ೧೪ ತನ್ನ (ಬ, ಮ, ದ). ೧೫ ಮನ್ನಣೆಯ ಸತಿಯೆನಿಸಿ ಕೊಂಡಿರ್ಪಳವರೊಳಗೆ (ಬ, ಮ, ದ).

ಪೆಸರೆಸೆವ ಪತಿಹಿತವೆಯೆಂದೆಂಬ ನಾಮದಿಂ
ಪೊಸತೆನಿಪ ಲಾವಣ್ಯಮಂ ತಳೆದಳೊಪ್ಪದಿಂ
ಎಸೆವ ವನಿತೆಯರಿರ್ದಡಂ ತಾರಗೆಗಳಂತೆ
[೧]ಮಿನುಮಿನುಗುತಿರ್ಪರಾ ಚಂದ್ರವದನೆಯ ಮುಂತೆ
ನೆನೆವ ಮನವೀವ ಕೈಯೆನಿಸಿರ್ಪಳಾತಂಗೆ
ತನ್ನ ನೇಹದಿಂ ಶರಣವಾಗಿರ್ಪಳಾತಂಗೆ
ಇಂತೆನಿಪ ಸತಿಗೆ ಪತಿಯಾಗಿ ಸುಖದಿಂದಿರ್ದು
ಸಂತತಂ ಶಿವಭಕ್ತಿ [೨]ಸಿರಿಯೊಳು ಮುಳುಂಗಿರ್ದು[೨]
ಭಕ್ತರ್ಗೆ ಮಾಡುವುದನೆಣಿಸ[೩]ಲೇನೆ[೩]ನ್ನಳವೆ
ಯುಕ್ತಿ ಹೊದ್ದದ ಶಿವಸ್ನೇಹ[೪]ವೇನಿಂ[೪]ತೊಳವೆ
ಇಲ್ಲೆನ್ನದೀವ ಬಿರು[೫]ದಿಂಗುಪ್ಪರಂಗಟ್ಟಿ
ಅಲ್ಲಿ ತನ್ನರ[೬]ಮನೆಯ ಮುಂದೆ ಮುಗಿಲಂ ಮುಟ್ಟಿ
ಇರ್ಪುದಾತನ ಮನಮನೇನೆಂದು ಬಣ್ಣಿಪೆಂ
ಸರ್ಪಭೂಷಣ[೭]ನ ಸುಖ[೭]ಸಜ್ಜೆ ತಾನೆಂದಪೆಂ

ಇಂತೆಸೆ[೮]ದಿರುತ್ತ[೮]ಮಿರೆ ಶಿವನ ಭಕ್ತರು ಬರಲು
ಸಂತಸಂ ಪರ್ವಿ ಪುಳಕಂಗಳೇಳುತ್ತಿರಲು
ಇದಿರ್ಗೊಂಡು ಹರನ ಶರಣರ [೯]ಚರಣಮಂ ತೊಳೆದು
ಸದಮಂ[೧೦]ಳಂ[೧೦] ಚಿತ್ತದೊಳು ಸಂ[೧೧]ತೋಷಮಂ ತ[೧೧]ಳೆದು
ಉನ್ನತಾಸನಮನೆಲ್ಲರ್ಗಿತ್ತು ಸಿಂಗರಿಸಿ
ಮನ್ನಿಸುತ್ತಂ ಮತ್ತೆ ಮತ್ತಂ ತ[೧೨]ಲಂಕರಿಸಿ
ಹೊನ್ನ ಹರಿಯಾಣಂಗಳಂ ಹಾಡಿ[೧೩]ಗೊಳಿಸುತಂ
ರನ್ನದಡ್ಡಣಿಗೆಗಳ ಮೇಲೆ ತಂದಿರಿಸುತಂ
ನಳನಳಿಪ ಕರ್ಪುರದ ಸೊಡರ್ಗಳಂ ಬೆಳಬೆಳಗಿ
ಹಳಹಳಿಪ ಧೂಪವಿತ್ತಾರತಿಗಳಂ ಬೆಳಗಿ
ಸವಿಗಳಂ ಸಾಲಿಡುವ ರಸದ ಪಕ್ವಾನ್ನಮಂ
ನವಪರಿಮಳಂ ಕರಗಿದಂತಿರ್ಪ ತುಪ್ಪಮಂ

---

೧ ಮಿಸಿಮಿನಿಸು (ದ). ೨ ಸಂಪದದೊಳೆಸೆದಿರ್ದು (ಅ). ೩ ಲಿಂತೆ (ಬ,ಮ). ೪ ವಿನ್ನಿಂ (ಬ, ಮ, ದ). ೫ ರಿ (ಮ). ೬ ಯ (ಬ,ಮ). ೭ ನಿರ್ಜ (ಬ,ಮ,ದ). ೮ ವುತಿರುತ (ಅ). ೯ ಪಾದಮಂ (ಅ). ೧೦ ಳಮಾನಂ (ಅ). ೧೧ ತಸಂದ (ಅ). ೧೨ ದ (ಬ,ಮ,ದ). ೧೩ ಡ (ಅ).

ಕ್ಷೀರ[೧]ಮುಯು[೧] ತವರಾಜಮಂ ನಿ[೨]ರ್ಮಳಾನ್ನಮುಂ
ಸೌರಭ್ಯಮಂ ಸೂಸುತಿರ್ಪ ನವಶಾಕಮಂ
ತನಿರಸಂ ಮಡುಗಟ್ಟಿದಾಮ್ರದ ಫಲಂಗಳಂ
ಇನಿದು [೩]ಕೆನೆಗಟ್ಟಿರ್ದ[೩] ಪಲಸಿನೊಳ್ದೊಳೆಗಳಂ
ಸವಿಯಿಂಡೆ[೪]ಗೊಂಡಿರ್ಪ ಕದಳೀಫಳಂಗಳಂ
ಇವು ಮೊದಲ್ಗೊಂಡಮೃತರಸಮಯಫಳಂಗಳಂ
[೫]ಬಲಿದ ಚಂದ್ರಿಕೆಯು[೫] ಕರಣ[೬]ಗಳ[೬]ನಿಪ ಕೆನೆಮೊಸರ
ನೊಲವಿಂದಲಿಕ್ಕಲುತ್ಸವದಿಂದೆ ಗಣವಿಸರ
ವಾರೈಸಲಿಕ್ಕೆ ಪ್ರಸಾದಮಂ ಕೈಕೊ[೭]ಳುತ[೭]
ಹಾರೈಸಿ ಪಕ್ವಾನ್ನದೊಳು [೮]ಸವಿಯ ಸವಿಗೊಳುತ[೮]
ಕಯ್ಗೆ ಸವಿ ಕಣ್ಗೆ ಸವಿ ಕಿವಿಗೆ ನಾಸಿಕಕೆ ಸವಿ
ಬಾಯ್ಗೆ ಸವಿಯೊಂದೆ ಪಂಚೇಂದ್ರಿಯಕ್ಕೆಯ್ದೆ ಸವಿ
ಎನಿಪ ದಿವ್ಯಾನ್ನಮಂ ಸವಿಸವಿದು ಕರಗುತಂ
ಮನಮೊಲ್ದು ಹಾರೈಸಿ ಪೂರೈಸಿ ಹಿಗ್ಗುತಂ
ಸವಿಯೊಳಗೆ ಜಿಹ್ವೆಯಾಳುತ್ತಮೇಳುತ್ತಮಿರೆ
ಸವಿಯೇ[೯]ಱಿ ಸರ್ವಾಂಗಮುಣ್ಮೆ[೧೦]ಜೊಮ್ಮೆಂ[೧೦]ಸುತಮಿರೆ
ಕಂಡು[೧೧]ಹಃಪಗೆ[೧೧]ಯಾಂಡರಾನಂದವೇಱುತಂ
ತಂಡತಂಡದ ಪುಳಕ[೧೨]ದಿಂಡೆಯುಂ[೧೨] ಹೇಱುತಂ
ಅಂತವರ್ತುತ್ತಿಡಲು ತಾಂ ದ[೧೩]ಣಿದು ತೇಗುತಂ
ಅಂತರ್ವಣಿಯೆ ತಾಂ ಹಿಗ್ಗಿ ಹೊರೆಯೇಱುತಂ
ತರಿಸಿ ಸಿರಿಗಂಧಮಂ ಕೈಘಟ್ಟಿಗೊಲಿದಿತ್ತು
ಪರಿಮಳಜಳಂಗಳಂ ಕರಸರೋರುಹಕಿತ್ತು
ಮಲಯಜಾದ್ಯನುಲೇಪನಂಗಳಂ ನಲಿದಿತ್ತು
ಒಳಸೋ[೧೪]ರ್ದು ತಾನವರ್ಗೆ ಕಿಂಕರತೆಯುಂ ಪೊತ್ತು
ರಸವೊಸರ್ವ ಪೊಸವೀಳೆಯಮನಿತ್ತು ಹರುಷದಿಂ
ಒಸೆದೊಸೆದು ಬೇಱಿಬೇಱಿಡಲಿತ್ತು ನೇಹದಿಂ

---

೧ ಮಂ (ಅ). ೨ ನೆ (ಅ). ೩ ಕೊನೆಗಡದಿರ್ದ (ಬ), ........ಡಿದಿರ್ದ (ಮ). ೪ ಬು (ಬ). ೫ ನಲಿದು ಬೆಳುದಿಂಗಳ (ಮ,ಬ). ೬ ಯೆ (ಮ,ಬ). ೭ ಂಡು (ಮ,ಬ.) ೮ ನಲಿದು ಸವಿಗಂಡು (ಮ,ಬ). ೯ ಸುತಾ (ಬ) ೧೦ ಝೊಂಪಿ (ಬ,ಮ). ಹಸ್ಸಳೆ (ಅ). ೧೨ ವೋದಮುಂ (ಮ,ಬ). ೧೩ ತ (ಬ). ೧೪ ಸಾ (ಅ).

ನುಡಿದುದಂ ನೆನೆದುವಂ ನೆನೆಯದುದನವರ್ಗಿತ್ತು
ಕೆಡದುದಂ ನವ್ಯಮುಮನೊಳ್ಳಿತುಮ[೧]ನವರ್ಗಿತ್ತು
ಕೊಂಡಾಡುತಿರ್ಪನಾನಂದದಿಂ ಭಕ್ತರಂ
ಮುಂಡಾಡಿ ಸುಖಮೊಳೋಲಾಡುತಿರ್ಪಂ ಕರಂ
ಕರೆದೀವನಿಲ್ಲೆನ್ನದೀವನುಬ್ಬುತ್ತೀವ
ನುರವಣಿಸುತೀವನಾರು[೨]ತ್ತೀವನೊಲ್ದೀವ
ಏನೆಂಬೆನಾತನತಿ ಭಕ್ತಿಯೌದಾರ್ಯಮುಂ
ನಾನಾಮುಖದೊಳೀವ ಪರಮ ಹಿತಕಾರ್ಯಮುಂ
*ಒಂದು ದಿನವಲ್ಲೆಯಾರ್ಪೈಸಿದಾತಂ ನೋಡೆ
ಎಂದೆಂ[೩]ದುವುಂ ಕೊಱತೆಯಿಲ್ಲದಿರ್ಪಂ ನೋಡೆ*

ಈ ತೆಱದೊಳಱುವತ್ತು ವತ್ಸರಂ ನಡೆವುತಿರೆ
[೪]ಭೂತಳದೊಳಗೆ ಭಕ್ತಿ ಪರ್ವಿ ಪಲ್ಲವಿಸುತಿರೆ[೪]
ಈತನಿಲ್ಲೆನ್ನದ ಬಿರುದನಱಿವೆನಾನೆಂದು
ಭೂತೇಶ್ವರಂ ಮನವನೊರೆದುನೋಡುವೆನೆಂದು
ಜಡೆಗಳಂ ಕಪ್ಪೆಸೆವ ಪೊಸಕುಂತಳಂ ಮಾಡಿ
ಉಡುಪತಿ ಸುರಾಪಗಗಳಂ ಮುಡಿದ ಹೂಮಾಡಿ
ಫಣಿಕುಂಡಲವನೆ ಮಾಣಿಕದ ಕಡುಕಂ ಮಾಡಿ
ಹಣೆಯ ಕಣ್ಣಂ ನೊಸಲ ಭಸಿತದಿಂ ಮುಚ್ಚಿಮಾಡಿ
ಸುರಶಿರೋಮಾಲೆ ಮುತ್ತಿನ ಹಾರವಾಗಿರಲು
ನೆರೆದ ದಶಭುಜವೆರಡು ಭುಜದೊಳಗಡಂಗಿರಲು
ಪಂಚ[೫]ವಕ್ತ್ರ[೫]ಮನೊಂದೆ [೫]ವಕ್ತ್ರ[೫]ದೊಳಗಳವಡಿಸಿ
ಸಂಚಿಸಿದ ಗರಳಮಂ ಕಾಂತಿಯೊಳೊಡಂಬಡಿಸಿ
[೬]ಕರಿಯ ಚರ್ಮವ ಮೇಲುದು[೬]ತ್ತರಿಗೆಯುಂ ಮಾಡಿ
[೭]ಮುರಿದುಟ್ಟ[೭] ಪುಲಿದೊವಲ[೮] ವರದುಕೂಲಂ ಮಾಡಿ
ಲೋಕಕ್ಕೆ ಹೊಸತೆನಿಪ ಚೆಲ್ವ ರೂಪಂ ತಳೆದು
ನಾಕಮಂ ಮರುಳ್ಗೊಳಿಸುತಂ ಧರಾತಳಕಿಳಿದು

೧ ದ (ಬ). ೨ ಲು (ಅ). *ಈ ಎರಡು ಸಾಲು ಅ ಹ ಗಳಲ್ಲಿಲ್ಲ. ೩ ದೊಂ (ಬ). ೪ ಈ ತೆಱದ ಭಕ್ತಿಯೊಳು ಕುಂದಿಲ್ಲದೀವುತಿರೆ(ಬ,ಮ). ೫ ವದನ(ಅ). ೬ ಕರಿಚರ್ಮಮಂ ಮೇಲೆ ಉ ಬ,ಮ). ೭ ಪೊರೆದು (ಬ,ಮ). ೮ ಲುಮಂ (ಬ,ಮ).

ಚೋಳದೇಶಪ್ರದೇಶವನಳ್ಕಱಿಂ ಪೊಕ್ಕು
ಶೂಲಿಭಕ್ತನ ಪರಿಗೆ ವೇಚ್ಚ್ಚಂತೆ ಮಾರ್ಗ[೧] ಮಿಕ್ಕು
ನಡೆದಿ[೨]ಹಃಪಗೆ[೨]ಯಾಂಡರೂರ ಹತ್ತಿರೆ ಬಂದು
ಮೃಡಮೂರ್ತಿ ಪುರದ ಬಾಗಿಲ್ವಾಡದೊಳು ನಿಂದು
ಪರಿಮಳವಿಡಿದ ಚೊಲ್ಲೆ[೩]ಹಕ್ಕಳಿಗಳೆಱಗು[೩]ತಿರೆ
ಕುರುಳ್ಗಳೊಂದೆಡು ಮುಂದಲೆಯೊಳುಂಗುರಿಸುತಿರೆ
ನೊಸಲೊಳಿರಿಸಿದ ವಿಭೂತಿಯ[೪]ಬೊಟ್ಟು ಬೆಳಗು[೪]ತಿರೆ
ಎಸೆವೆರ[೫]ಡು ಮಾ[೫]ಣಿಕದ ಕಡುಕುವೊಪ್ಪುತ್ತಮಿರೆ
ಹೊಳೆವ ಬೆಳತಿಗೆಗಂಗಳಲ್ಲಿ ಬೆಳಗಂ ಸೂಸೆ
ಬೆಳೆವ ತುಪ್ಪುಳುಮೀಸೆ ಹಳಹಳನೆ ನಳನಳಿಸೆ
ಒಂದೆರಡು ಮೀಳೆಯುದ ಸುಲಿದ ಪಲ್ಲೊಪ್ಪುತಿರೆ
ಸಂದಣಿಪ ಚೆಲುವಿಂದೆ ತೊಳಪ ಮೊಗ[೬]ವಲರು[೬]ತಿರೆ
ಒಂದು[೭]ಮುತ್ತಿನ ಹಾರವಗಲುರದೊಳಗೆ ಮೆಱೆಯೆ
ಸಂದಣಿಪ ತೋಳ್ಗಳಗ್ಗಳಿಪ ನಯಮಂ ಕಱೆಯೆ
ಕರತಳಂ ಕಂಡವರ್ಗೆ ರಾಗಮನಲರ್ಚು[ತಿರೆ]
ಕರನಖಂ ನೋಳ್ಪವರ[೮]ಕಣ್ಣೊಳಗುಳುಂಕುಳ[ತಿರೆ]
ಉಟ್ಟ ಹೊಸ[೯]ದೇಸಾಳದುಡಿಗೆ ರಂಜಿಸುತಮಿರೆ
ಮುಟ್ಟಿದೊಡೆ ಶಿಲೆಯುಂಕುರಿಪುದೆಂಬ ತೆಜದೋಳಿರೆ
ಬೆಳ[ು]ದಿ[ಂ]ಗಳಿಂದೆ ಮಾಡಿದ ಮೂರ್ತಿಯಂದದಿಂ
ಬೆಳಗು ಚೆಲುವಾಕಾರವಾದುದೆಂಬಂದದಿಂ
ನಟನೆಯಿಂ ಕೊಂಕುತಂ ಬಳಿಕಿ ಮೆಲ್ಲಡಿಯಿಡುತೆ
ವಿಟವೇಷದಿಂ ವಿಳಾಸಂ ಸೂಸಲಡಿಯಿಡುತೆ

ಬರೆ ಪುರ[೧೦]ದೊಳೆ[೧೦]ಲ್ಲ ಜವ್ವನಗಾಳಿ ತೀಡಿತ್ತು
ವರನಾರಿಯರ ಚಿತ್ತವಂ ಸೋಂಕಿ ತಿರುಗಿತ್ತು
ಎವೆಯಿಕ್ಕದಲ್ಲಲ್ಲಿ ನೋಡುತಿರ್ಪರ್ಕೆಲರು
ತವತವಗೆ ತೋಱಿ ಮಾತಾಡುತಿರ್ಪರ್ಕೆಲರು

೧ ತಂ ಪುನ (ಬ,ಮ). ೨ ಹಸ್ಸಫೆ (ಅ). ೩ ಯು (ಬ,ಮ). ೪ ತಿಲಕಮೊಪ್ಪ (ಅ). ೫ ಳ್ಮ (ಅ). ೬ ಪೊಪ್ಪ ಅ). ೭ ದೆ (ಅ). ೮ ಕಣ್ಗಳೊಳಸೋರು (ಅ). ೯ ದಸಾಳಡಿಗೆ (ಅ). ೧೦ ಡ ಜನಕೆ (ಬ,ಮ).

ಈ ಕಣ್ಗಳೀ ನೋಟವೀ ಹರೆಯವಿನ್ನೆಂತು
ಲೋಕ[೧]ಕ್ಕಿದಚ್ಚರಿಯು[೧] ರೂಪು ಸುಳಿಯಿತ್ತಿಂತು
ನಡೆವ ಪರಿ ಪೊಸತು ನೋಡುವ ಪರಿ ಕರಂ ಪೊಸತು
ನುಡಿವ ಪರಿ [೨]ಬೇಱೆ[೨] ನಿಲವಿನ ಪರಿ ಕರಂ ಪೊಸತು
ಸೋಜಿಗದ ಸುಕುಮಾರನೀ ಬಂದನೆಲಗವ್ವ
ಮೂಜಗದ ಜವ್ವನಿಗನೀ ಬಂದನೆಲಗವ್ವ
ಎನುತೆ ತಮ್ಮಂ ಮಱೆದು ಬೆಂಬತ್ತಿ ಬರುತಿ[೩]ರಲು[೩]
ತನತನಗೆ ಮೀಱುತಂ [೪]ಮೈಯೊಡ್ಡಿ ಬರುತಿರಲು[೪]
[೫]ನಡೆದ ಹಜ್ಜೆಯ ಸೋಂಕೆ ನಡೆನಡೆದು ಪುಳಕಿಸುತೆ[೫]
ನುಡಿಯ[೬]ಲಾ ಸವಿಗೇಳ್ದ[೬] ಕಿವಿಗೆ ಮಾಱಾ[೭]ಗುತ್ತೆ
ಬಂದರ್ವಸಂತರಾಜನ ಬಳಿಯ ಲತೆಯಂತೆ
ಇಂದುವಿನ ಬಳಿಲ ಬರ್ಪ ತಾರಾನಿಕರದಂತೆ

ಇಂತು ಬರೆ ಬಂದು ಕೇರಿಗಳೊಳಗೆ ಸುಳಿವುತಂ
ಮುಂತಿಹಃಪಗೆಯೂಂಡರರಮನೆಗೆ ನಡೆವುತಂ
ಬಂದು ಕಾರ್ಬಳತೆಯೊಳಿರಲ್ಕಂಡು ನಿಂದಿರ್ದು
ಅಂದವರನೀಕ್ಷಿಸುತೆ ಸಂದೇಹಿಸುತ್ತಿರ್ದು
ನೊಸಲ ಭಸಿತಾವಶೇಷದನಾವನಾದ[೧೦]ಂಡಂ
ಶಶಿಧರನೆನುತ್ತೆ ಬಂದವ[೧೧]ರದೊತಿರ್ದಡಂ[೧೧]
ಶರಣಾರ್ಥಿ ದೇವ ಶರಣೆಂದು ಕಾಲೊಳ್ಕೆಡೆದು
ಹರನೆ ಬಿಜಯಂಗೆಯ್ವುದೆಂದು ಕರುಣಂಬಡೆದು
ಒಡಗೊಂಡು ಬಂದು ನಲಿದುನ್ನತಾಸನವಿಕ್ಕಿ
ಬಿಡದೆ ಚರಣಂಗಳಂ ತೊಳೆದೆದ್ದು ಮೆಯ್ಯಿಕ್ಕಿ
ದೇವ ಬಿಜಯಂಗೆಯ್ವು[೧೨]ದೆ[೧೨]ಡೆಮಾಡಿತೊಳಗೆನಲು
ದೇವ [೧೩]ಭಕ್ತಂಗೆಂಡನಲ್ಲಿಗಾವೇಕೆನಲು[೧೩]
ಅರ್ಪಿಸಲಿಕ್ಕುವುದಕಾವೆಲ್ಲಿಗಂ[೧೪]ನಡೆದು
ಬಾರೆವೆಮಗಾವುದುಂ ಕೊಱತೆಯಿಲ್ಲಂ ಪಿರಿದು

---

೧ ಕಚ್ಚರಿಯೆನಿಪ (ಅ). ೨ ಹೊಸತು (ಅ). ೩ ರ್ದ (ಬ, ಮ). ೪ ಬೆಂಬತ್ತಿ ಬರುತಿರ್ದ (ಬ, ಮ). ೫ ನಡವಡೆ ನಡದ ಹಜ್ಜೆಯಂ ಸೋಂಕಿ ಹಿಗ್ಗುತ್ತೆ (ಬ, ಮ). ೬ ನಾಲಿಸಿಕೇಳ್ದ (ಅ). ೭ ಱಣ (ಅ). ೮ ವಿನೊದನೆ (ಬ, ಮ). ೯ ಣ್ಬ (ಅ). ೧೦ ದೊ (ಅ). ೧೧ ರೆಂತುವಿರ್ದಡಂ (ಬ, ಮ). ೧೨ ತೆ (ಅ,ಬ,ಮ). ೧೩ ಭಕ್ತರ್ ನುಡಿದಡಾತನೇ ಗುರುವೆನಲು (ಬ,ಮ). ೧೪ ಗೆಯು (ಬ,ಮ).

ಇಲ್ಲಿನ್ನದಭವಭಕ್ತರ್ಗೀವುದಂ[1] ಕೇಳ್ದು
ಸಲ್ಲೀಲೆಯಿಂದೆ ಮನದೊಳು ಹರುಷಮಂ ತಾಳ್ದು
ಬಂದೆವಿಲ್ಲಿಗೆ ನಿಮ್ಮೊ[2]ಳೊಂದ ನಿಶ್ಚಯಿಸುತಂ
ಕುಂದದಿಚ್ಛೆಯನೀವರೆಂದು ಮು[3]ಯ್ವುರ್ಚುತಂ
ಉಳ್ಳಡುಂಟೆಂಬು[4]ದಿಲ್ಲದಡಿಲ್ಲವೆಂಬುದಯ್ಯ[4]
[5]ಉಳ್ಳಾಡಲಾಗದಾವೆಂಬುದಂ ಕೇಳಿದಯ್ಯ[5]
ಬೇಡುವೆವೊ ಹೋಹೆವೋ [6]ಪೇಳೀಗ ನೀನೊಂದ[6]
[7]ನಾಡ ಬೂತುಗಳವೋಲ್ಕಾಡಲ್ಕ ಬಾಯೆವೆಂದ[7]
ಮಾತನಾಲಿಸಿ ಕೇಳುತಂ [8]ಪೇಳಿರೇ[8] ದೇವ
ಏತೆರ್ಜ[9]ನದಂ ಬೆಸಸಲಾನಿತ್ತಪೆಂ[9] ದೇವ
ಬೇಡಿ ಕರುಣಿಸಿ ನಿಮ್ಮ ಚಿತ್ತದೊಳಗಿರ್ದುದಂ
ನೋಡಿಯನುಸರಿಸಿ[10] ಬೇಡೀವೆನೇನೆಂದುದಂ
ಎನೆ ಭಕ್ತನಿಂತೆಂದನೆಮ್ಮ ದೇವಾರ್ಚನೆಗೆ
ವನಿತೆಯೊರ್ವಳನೀವುದಾ ಪರಿಚರಿಯದೆಡೆಗೆ
[11]ಸೊಬಗೆ[11]ಯಂ ಮುಗುದೆಯಂ ಸದುಗುಣಾಭರಣೆಯಂ
ಅಬಳೆಯಂ ಪತಿಹಿತವೆಯಂ ಸುಖಾವರಣೆಯಂ
ಹರುಷದಿಂದೀವುದೆನೆ ದೇವಾ ಇದೊಂದರಿದೆ
ಕರಸಿದಪೆನೆನ್ನಯ ವಿಳಾಸಿನಿಯ[12]ರೆನಿಬರದೆ[12]
ಎನೆ ಬಂದ ಸತಿಯರಿನ್ನೂರ್ವರಂ ತೋಱುತಿರೆ
ಮನದೊಳಿಚ್ಛಯಿಸಿದವರಂ ಕೊಳುವುದೆನುತಮಿರೆ
ಕಂಡು ಭಕ್ತರ್[13] ನಲಿದು ನಸುನಗುತೆ ನಿಂದಿರ್ದು
ಕಂಡೆವೇನುಂ ಬೇಡ ಸಾಲ್ಗೆಂದು ಹೇ[14]ಳಿಸಾರ್ದು
ನಿನ್ನಲ್ಲಿ ತಪ್ಪಿಲ್ಲ ಕೊಳ್ಳ[15]ದವರಾವೆಂದು[15]
ನಿನ್ನ ನೇಮಂ ಚೆಲ್ವನಾಯ್ತು ಪೋದಪೆ[16]ವೆಂದು[16]
ಎಮಗೆ ಹೆಂಡಿರು ಬೇಡ ತೊತ್ತಿರಂ ನಾನೊಲ್ಲೆ
ಎಮ[17]ಗಿನಿತು[17] ಮಾತು ಸೈರಿಸದದಂ ನೀಂ ಬಲ್ಲೆ

---

೧ ಕಂ (ಅ). ೨ ನ್ನೊ (ಬ,ಮ). ೩ ಮೆ (ಅ). ೪ ದಿಲ್ಲಾದಡಿಲ್ಲೆಂಬು (ಬ,ಮ). ೫ ದಳ್ಳಾಡಲಾಗದಾವೆಂಬುದೆಲ್ಲಗೀಂಬು (ಬ,ಮ). ೬ ಪೇಳಿರೇ ನೀವೆಂದು (ಬ, ಮ). ೭ ಆಡಲೇಕುಳ್ಳುದನೆನುತ್ತಿರಲ್ಕವರಂದು (ಬ,ಮ). ೮ ಕಂಡಿರೇ (ಬ,ಮ). ೯ ದೆ ಬೆಸಸು ನಡೆ ಎನ್ನನಜಿರಿಯರೆ (ಅ,ಮ). ೧೦ ಸ (ಅ). ೧೧ ಸುಭಗೆ (ಬ, ಮ). ೧೨ ರಂ ಭರದೆ (ಬ, ಮ). ೧೩ ಕ್ತಂ (ಅ . ೧೪ ಹೊ (ಬ, ಮ). ೧೫ ದಂತುಂಟೆಂದೆ (ಬ). ೧೬ ವಿಂದೆ (ಬ,ಮ). ೧೭ ಗಿಂತು (ಬ,ಮ).

ಎನೆ ಗಡಗಡನೆ ನಡುಗಿ ಚರಣಯುಗಮಂ ಪಿಡಿದು
ತಸುಜನೊಳು ತಪ್ಪನಱಿಸಲ್ವೇಡೆನುತ್ತಗಿದು
ಎಲೆ ದೇವ ನಿಮ್ಮ ತೊಳ್ತಿರು ನೂರ್ವರುಂಟಲ್ಲಿ
ನಲವಿಂದವರೊಳೊರ್ವಳಂ ಕೊಂಬು[೧]ದೆಂದ[೧]ಲ್ಲಿ
ಎಂದು ತನ್ನಯ ರಾಣಿವಾಸಮಂ ಕರೆಸುತಂ[೨]
ಬಂ[೩]ದವರನೊಯ್ಯಾರದಿಂದೆ ನಿಂದಿರಿಸುತಂ[೪]
ತೋಱಲೆಲ್ಲರನೊಲ್ಲೆನೊಲ್ಲೆನೆಂದೆನುತಮಿರೆ
ನೀಱೆಯ[೫]ರ್ಗಳಿ[೫]ವರಾಗದೆನಗೆ ಬೇಡೆನುತಮಿ[೬]ರೆ
ಕೃತಕದಿಂ[೭] ತೋಱ[೮]ದರಿನೊಲ್ಲೆ[೮]ನೆಂದೆನುತಮಿರೆ
ಪತಿಹಿತವ್ರೆ[೯]ಯಲ್ಲದುಳಿದರ್ರನೊಲ್ಲೆನೆನುತ ಬ[೧೦]ರೆ
ಕಂಡಿಹ[೧೧]ಪಗೆಯಾಂಡರಿನ್ನೆಂತು ಮಾಡುವೆಂ
ಕಂಡರೆಲ್ಲರನೊಲ್ಲೆನೆಂದಪ್ಪರೇಗುವೆಂ
ಪತಿಹಿತವ್ರೆಯುಂ ತೋರ್ಪೆನೊಲ್ಲೆನೆಂದಡೆ ಬಳಿಕ
ಅತಿ[೧೧]ಮಾತನಾಡುವುದ[೧೧] ನೋಡಿಕೊಂಬೆಂ ಬಳಿಕ
ಒಪ್ಪಿಸುವೆನೆನ್ನ ದೇಹವನಿವರ ಚರಣಕ್ಕೆ
ಅಪ್ಪುದಾಗುತ್ತಿರ್ಕೆ ಸಾಲ್ಗೆನ್ನ ಜನ್ಮಕ್ಕೆ

ಎಂದಿಂತು ಚಿಂತಿಸುತೆ ಪತಿಹಿತವ್ರೆಯಂ ಕರೆಸೆ
ಬಂದಳು ಭಕ್ತನ ಮನಂ ಹರುಷದೊಳು ಬೆರಸೆ
ಬರೆ ಕಂಡು ದೇವ ಪರಿಚರಿಯಕ್ಕೆ ತಕ್ಕಸತಿ
ಹರನೆ ಕೈಕೊಂಬುದಿಂ ಬೇಱಿಲ್ಲ ನೀವೆ ಗತಿ
ಎನಲೊಡಂಬಟ್ಟು ಭಕ್ತರು ಸುಮ್ಮನಿರ್ದಂದು
ಅನುಸರಿಸಿ ಕೊಂಡೆ[೧೨]ವಾಗಲಿಯುದಕ್ಕೇನೆಂದು
ನುಡಿಯೆ ಪುಳಕಿತನಾದ[೧೩]ನೊಲಿದಿಹಪಗೆ[೧೩]ಯಾಂಡ
ನಡಿಗಡಿಗೆ [೧೪]ಹೆಚ್ಚಿದಾ[೧೪]ನಂದವುಂ ಕೈಕೊಂಡ
ಇಂದು ಕೃತಕೃತ್ಯನಾದೆಂ ದೇವ ನಡೆ ತಂದೆ
ಇಂದಾನು [೧೫]ಧನ್ಯ[೧೫]ನಾದೆಂ ದೇವ ಕರುಣಿಸಿದೆ

---

೧ ದಿನ್ನಿ (ಅ). ೨ ತ್ತೆ (ಬ,ಮ). ೩ ಅಂ (ಅ). ೪ ತ್ತೆ (ಬ,ಮ). ೫ ರು ಇ (ಬ,ಮ). ೬ ಬ ಬ,ಮ). ೭ +ದಂ (ಬ,ಮ). ೮ ನೆನುತ ಬರೆ (ಬ,ಮ). ೯ ಯುಳಿಯುಲೆಲ್ಲರ (ಅ). ೧೦ ವಿ (ಅ). ೧೧ ಮಥನಮಾತವಂ (ಬ, ಮ). ೧೨ ಬೆ (ಬ, ಮ). ೧೩ ನಂದಿ ಹಸ್ಸಳೆ (ಅ). ೧೪ ಹೆಚ್ಚುತಾ (ಮ, ಬ). ೧೫ ವಂದ್ಯ (ಬ,ಮ).

ಎಂದು ಪತಿಹಿತವೆ ಸಹಿತವರನೊಲವಿಂ ಕಳುಪೆ
ಇಂದು ನೇಮಂ ಸಂದುದೆಂದುಮ್ಮಳವನಿಳಿಪೆ
ಪೋೞ[1]ವಂಟನೊಲವಿಂದೊ ವಿಟವೇಷದೀಶ್ವರಂ
ಪೆ[2]ಱಗೆ ಪತಿಹಿತವೆ ಬಳಿಬಳಿ ಬರುತ್ತಿರೆ ಕರಂ
ಕಂಡು ಪುರಜನವೆಲ್ಲಿದೇಸಿದೇ ಸಘಟಿತಂ
ಮಿಂಡನೊಡನೊಡನೆ ಪತಿಹಿತವೆ ನೋಡದ್ಭುತಂ
ಆವನೆಂದಱಿಯೆವು[3] ಮರುಳ್ಮಾಡುತೀ ಹೋದ
ಓವೊವೋ ನೋಡಿೞಪಗೆಯಾಂಡರೇನಾದ
ಇಂತು ಕೊಟ್ಟವರುಂಟೆ [4]ಚೆನ್ನುಳ್ಳ ಕುವರಿಯಂ[4]
ಕಂತು ನೆಱೆ ಬಯಸಿ ಪಡೆ[5]ವನೆ[5] ಸುಕುಮಾರಿಯಂ
ಹಾಸಿಂದಲಿಳಿಯದ[6]ಳ ಬೀ[6]ದಿಯೊಳ್ಬರಿಸಿದಂ
ನೇಸಱಿಂ ಕಾಣದಳ[7]ನೀ ಬಿಸಿಲೊಳ[7]ರಿಸಿದಂ
ಘಾಸಿಯಾದುದು ನೋಡ ಪತಿಹಿತವೆಯರ ಕುಲಂ
ಬೀಸರಂಬೋದುದಿನ್ನೇನು ವಂಶದ ಫಲಂ
ಎಂದು ನುಡಿವರ್ಗೆ ಪತಿಹಿತವೆ ನೆಱೆ ಕೋಪಿಸುತೆ
ಎಂದುವುಂ ಶಿವಭಕ್ತಿ ನಿಮಗಾಗದಿರ್ಕೆನುತೆ
ಬರೆ ಪುರದ ಪುಯ್ಯಲಾಕೆಯ ಬಂಧುಗಳಿಗೆಯ್ದೆ
ಉರಿದೆದ್ದು ಸೋದರಂಗಳ್ಬಂಧುಜನವೆಯ್ದೆ
ಶಿವ ಮರುಳ್ಗೆ [8]ಕೊಟ್ಟೆವಿ[8]ನ್ನೇನು ನಮಗಿದು ಪಿರಿದೆ
ಅವನೊ[9]ಳಿನ್ನಾ[9]ವುದು ಕುಲಾಚಾರವಱಿಸುವುದೆ
ಕೊಟ್ಟ[10]ನಿಂತಭಿಮಾನವುಂ ನೆಱೆ ವಿಚಾರಿಸದೆ
ನೆ[10]ಂಟ್ಟನೀ ಲೋಕಾಪವಾದಮಂ [11]ವಾರಿ[11]ಸದೆ
ಕೊಂಡೊಯ್ವನಾವ[12]ನಾತಂ[12]ಗವೆಂಟಿರ್ದೆಯುಂಟೆ
ಮಂಡಲದೊಳಂತವಂಗೆ[13] ನೊಸಲ ಕಣ್ಣುಂಟೆ
ಚೋಳನಾದಡಮವನ ಕೈಯಿಂದೆ ತಂದ[14]ಪೆವು[14]
ಭಾಳಲೋಚನನಾದಡಂ ಕಾದಿ ತಂದ[14]ಪೆವು[14]

---

೧ ಮುಟ್ಟನೊಲಿದಾಹ (ಅ). ೨ ಹೊ (ಬ, ಮು). ೩ ನೆಲೆ (ಬ, ಮು). ೪ ಈ ಸೌಕುಮಾರಿಯಂ (ಬ, ಮು). ೫ ಯುವ (ಅ). ೬ ಳ್ಪೀ (ಅ). ೭ ಬಿಸಿಲೊಳೆಯ್ತ (ಅ). ೮ ಕೊಟ್ಟಡಿ (ಬ, ಮು). ೯ ಳೀ ನಾ (ಮು). ೧೦ ಕೊ (ಬ, ಮು). ೧೧ ಮುನ್ನಿ (ಬ, ಮು). ೧೨ ನವನಂ (ಮು). ೧೩ ಗಂ (ಅ). ೧೪ ಪ್ಪೆ (ಅ, ಪ).

ಎಂದು ಗದ್ದುಗೆವೊಯ್ದು ನೆರೆದುದಾಕೆಯ ಕುಲಂ
ಬಂದು ಕೂಡಿತ್ತು ಶಿವದ್ರೋಹಿಗಳ ಪಡಿಬಲಂ

ಗಜದೊಡ್ಡು ತುರಗರಥದೊಡ್ಡುಗಳವಲ್ಲಲ್ಲಿ
ನಿಜ ಭುಜಾಲಾಪದ ಪದಾತಿಯೊಡ್ಡುಗಳಲ್ಲಿ
ಸೆಳೆಯ ಸಿಂಧದ ಕಟ್ಟೆದುಪ್ಪರಗುಡಿಗಳಲ್ಲಿ
ಹೊಳೆವ ಠಕ್ಕೆಯುದ ನೆರೆದಣು[೧]ಬಳಗ[೧]ವಲ್ಲಲ್ಲಿ
ಕೊಡೆ ಹೀಲಿದಳೆ[೨] ಪರಿಪರಿಯ ಸತ್ತಿಗೆ[೩]ಗಳ[೩]ಲ್ಲಿ
ಕಿಡಿಯನುಗುಳ್ವಲಗುಗಳ ಥಳಥಳಿಪ ಬೆಳಗಲ್ಲಿ
ಹೊತ್ತ ಬಾಳಿಂ ಸೆಣಸುತಿರ್ಪ ರಾವುತರಲ್ಲಿ
ಒತ್ತಿ ನೂಂಕುವ ಗಜಾರೋಹ[೪]ಕಾಳಿಗಳಲ್ಲಿ[೪]
ಧರಣಿ ತಲ್ಲಣಿಸೆ [೫]ಪರಿಯಿಪ ಸಾರಥಿಗಳಲ್ಲಿ[೫]
ಉರವಣಿಪ ಕಾಲಾಳ [೬]ತೊತ್ತುಳಿ[೬]ಗಳಲ್ಲಲ್ಲಿ
ಹೊಯ್ವ ನಿಸ್ಸಾಳ ತಂಬಟ [೭]ಭೇರಿಕುಳವಲ್ಲಿ[೭]
[೮]ಬಯ್ವ[೮] ಬಿರುದಿನ ಕಹಳೆಗಳ ತಿತ್ತಿರಿ[೯]ಗಳ[೯]ಲ್ಲಿ
ಧವಳ ಶಂಖಂ ಕರೆವ ಜವಳಿಗಹಳೆಗಳಲ್ಲಿ
ತವೆ ಚೀ[೧೦]ಱುತಿರ್ಪ [೧೧]ಚಿನ್ನಂಕಿನ್ನರಿಗಳಲ್ಲಿ[೧೧]
ಇಕ್ಕೆಲದೊಳೊಲೆವ ಕೋ[೧೨]ವಳಗಟ್ಟಿಗೆಗಳಲ್ಲಿ
ತೆಕ್ಕೆಯಿಂದೊತ್ತರಿಪ ಜೋದ ಜೋಕೆಗಳಲ್ಲಿ

ಇಂತು ನೆರೆದುದು ಚಾತುರಂಗಬಲ ಬ[೧೩]ಲಿದಿತ್ತ
ಪಿಂತೆ ಪತಿಹಿತವೆ ಸಹಿತಂ ಬರುತಭವನತ್ತ
ಪುರದ ಬಾಗಿಲುವಾ[೧೪]ಡವಂ ಪೊಱಮಡ[೧೫]ಲು ಕಂ[೧೫]ಡು
ನೆರವಿಗಳೆಲೇ[೧೬] ಮಿಂಡಗೊರವ ಹೋಹರೆ ಕೊಂ[೧೭]ಡು
ಅಕ್ಕವಳೆ ಪತಿಹಿತವೆ ನಿನಗೆಲೆ ಮರುಳ್ತರಳ
ಚಕ್ಕನೆ ಮರಳು ನಿನ್ನ ವಶವಲ್ಲವೆಲೆ ದುರುಳ

೧ ಕುಗಳ (ಬ,ಮು). ೨ +ಯ (ಅ,ದ). ೩ ಯ (ಅ, ದ). ೪ ಕಸಿಕರವಲ್ಲಿ (ಬ,ಮು). ೫ ನೆರೆದುದು ರಥಿಕರಲ್ಲಲ್ಲಿ (ಅ,ದ). ೬ ಕೊತ್ತಳ (ಅ). ೭ ದ ಭೇರಿಗಳಲ್ಲಿ (ಬ,ಮು). ೮ ಬಯಿವ (ಅ). ೯ ಯ (ಅ). ೧೦ ಜೀ (ಬ,ಮು). ೧೧ ತಿರಿಚೆನ್ನಕಿನ್ನರಿಯಲ್ಲಿ (ಬ,ಮು). ೧೨ ಗೋ (ಬ,ಮು). ೧೩ ಪೊ (ಅ, ದ). ೧೪ ಲ್ವಾ (ಬ, ಮು). ೧೫ ಲ್ಕಂ (ಬ,ಮು). ೧೬ ಲೆಲೆ (ಅ). ೧೭ ಕಂಡು (ಅ,ದ).

ಈಕೆಗೋಸುಗ ಚಾತುರಂಗಬಲ[1]ವಿದೆಯೆನಲು
ಏಕೆ ಪೋದಪೆ [2]ತರಳ[2] ನಿನಗೊಡೆಯ[3]ರಿಲ್ಲೆನಲು[3]
ಕೇಳ್ದು ಸಜ್ಜನೆ ತಿರುಗಿ ಗಳಗಳನೆ ನಡೆತಂದು
ತಾಳ್ದ ಕೋಪವನಿಹಃಪಗೆಯಾಂಡರೊ[4]ಳ್ಳಿಂದು[4]
ನೀಂ ಕೊಟ್ಟೆ ನಾಂ ಕೊಂಡೆನೇನುಂ ಕೊಱತೆಯಿಲ್ಲ
ಶಂಕಿಸದೆ ಬಡಭಕ್ತರೊಡನಿದೇಕೀ[5] ಚಲ್ಲ
ಈ ಪರಿಯೆ ಮುನ್ನ ಭಕ್ತರ್ಗೆ ಮಾಡುವ ಭಕ್ತಿ
ಭಾಪುರೇ ಲೇಸಿಹಃಪಗೆಯಾಂಡ ಹೊಸಯುಕ್ತಿ
ಇದಱಿಂದವಿಲ್ಲೆಂದಡಂ ನಿನಗೆ ದೋಷಮೋ
ಮದವಳಿದ[6] ಭಕ್ತರೊಳು ಸರಸವಭ್ಯಾಸಮೋ
*ಈದಳೇ ಪತಿಹಿತವೆ ಹೋದೆಹೆವೆನುತ್ತಂದು
ಆದುದೆಮಗಂದೆ ಬೇಡಿತ್ತು ಬಂದುದು ಇಂದು
ಉಸುರೆ ಕೇಳ್ದಿಹಪಗೆಯರೇನೆಂಬ ಪರಿಯೆನಲು
ಅಸರಣೆಯ ಮಾತನೆಮಗರುಪುವುದು ನೀವೆನಲು*
ಪತಿಹಿತವೆಯರ ಸಕಲ ಬಂಧುಬಳಗಂ ನೆರೆದು
ಅತಿಕೋಪದಿಂದೆ ಚತುರಂಗಬಲವಂ ಕರೆದು
ಕೊಂಡು [7]ಘುಡುಘುಡಿ[7]ಸುತದೆ [8]ಕಣ್ಗೆ ಭೀಕರ[8] ನೋಡ
ಕೊಂಡೊಯ್ವನಾವನೆಂದಳ್ಳಿಱಿವುತದೆ ನೋಡ
†ಎಂದು ಬೆಸಸಲ್ಕಿಹಃಪಗೆಯಾಂಡರೊಳಗೊಳಗೆ
ನಿಂದು ಬೆಱಗಾಗಿ ನಸುನಗುತಂದು ಮನದೊಳಗೆ
ದೇವ ಎನ್ನಂ ನೋಡುತಿನಿರ್ತ[9] ಬೆಸಸುವರೆನಲು
ಆವನುಂಟೆನಗಿದಿರು ನಡೆಯೆ ಕೇಳುಹ[10]ವೆನಲು†
ಬೇಡ ನಿನ್ನ[11]ವಲ್ಲವಂದಿರ ಬಲಂ ಪಿರಿದು
ನೋಡ ನೀನೊರ್ವನಾ ಬ[11]ಲವಂ ಗೆಲುವುದರಿದು
ಇನಿತುದಿನವಿಲ್ಲೆನ್ನದಿ[12]ತ್ತುದೇ[12] ಸಾಲದೇ
ಇನಿತೇಕಿದೊಂದಱಿಂದಂ ಕೊಱತೆಯಾದುದೇ

೧ ವದೆ ನೆರದು (ಬ, ಮು). ೨ ತರುಣ (ಬ, ಮು). ೩ ಲ್ಲೆಂದು (ಬ, ಮು). ೪ ಳಗಂದು (ಬ,ಮು). ೫ ಕೈ (ಅ). ೬ ದು (ಬ,ಮು). *ಈ ನಾಲ್ಕು ಸಾಲುಗಳು ಬ,ಮು ಪ್ರತಿಗಳಲ್ಲಿ ಮಾತ್ರ ಇವೆ. ೭ ಘುಳುಘುಳಿ (ಅ.) ೮ ನೋಡಬಾರದು (ಬ, ಮು). †ಈ ನಾಲ್ಕು ಸಾಲು ಆ ಪ್ರತಿಯಲ್ಲಿಲ್ಲ. ೯ ತು (ಮಿ). ೧೦ ಹೆ (ಮು). ೧೧ ದ (ಮು). ೧೨ತ್ತಡಿದು (ಬ,ಮು).

ಹೋ[೧]ದೆಹೆ[೧]ವು ಪತಿಹಿತವೆಯೀಯಿರ್ದಳೆನುತಮಿರೆ
[೨]ಆದುದೆಮಗಂದೆ ಬೇಡಿತು ಬಂದುದೆನುತಮಿರೆ[೨]
ಕೇಳ್ದಿ ಹಃಪಗೆಯಾಂಡರೊಳಗೊಳಗೆ ನಸುನಗುತೆ
ತಾಳ್ದು[೩] ನಸುಗೋಪವಸಿ[೪]ದೊಂದರಿದೆ ಶಿವಯೆ[೪]ನುತೆ
ದೇವ ಇಂತಿದ[೫]ನೆನಗೆ ನೀಂ[೫] ಬೆಸಸವೇಳ್ಪುವೋ
ಆವುದೊಂ[೬]ದುಂ ಇ[೬]ಹಃಪಗೆಯರೊಳು ನಿಲ್ಪುವೋ
ಎಲೆ ದೇವ ದೇವ ನಿಮ್ಮೊಡನೆ ನಾ [ನಿ][೭]ಂದಪೆಂ
ತಲೆಲಪಜ[೮]ಲದಡಟ್ಟಿಯೊಳವಂದಿರಂ ಕೊಂದಪೆಂ
ಆಜ[೯]ಿಯರಯ್ಯೋ ಇಹಃಪಗೆಯಾಂಡರಾಳ್ತನವ
ಆಜಸಿ ಕಾಳೆಗಕೆ ಕಾಮಿಸುವ ಬಲ್ಲಾಳ್ತನವ
ಅಂಜದಿರಿಯಂಜದಿರಿಯಾವುದುಂ ಭಯವಿಲ್ಲ
[೯]ಎಂಜಲಿಪೆನೆನ್ನ[೯] ಕೂರಸಿಯಿಂದಲರಿದಿಲ್ಲ
ನಾನೆ ಸುಯಿಧಾನದಿಂದಂ ಬಂದು ಕಳುಪುವೆಂ
ಈ ನೆಲಂ ನಲಿಯೆ ಭೂಭಾರ[೧೦]ಮುಮಂ[೧೦]ನಿಳುಪುವೆಂ
ಕಯ್ಯ ಹಸಮಂ ಕಳೆದುಕೊಂಬೆನಾನೋಲಿದಿಂದು
ಅಯ್ಯಯ್ಯ ಜವನೊಡನೆ ಚಲ್ಲವಾಡಿದರೆ[೧೧]ದು

ಎನುತೆ ಭುಜಮಂ [೧೨]ಹೊಯ್ದು[೧೨] ಕೊನೆಮೀಸೆಯಂ ತಿದ್ದಿ
ತನು[೧೩]ಗೆಂಪು ಕಂಗೇ[೧೪]ಅಿ ಕಡುಗೋಪಮಂ ಹೊದ್ದಿ
ಮುಳಿದು ಭುಗಿಲೆನುತೆ ಭಸಿತೋದ್ಧೂಳಸಂ ಮಾಡಿ
ತೊಳತೊಳಪ ರುದ್ರಾಕ್ಷಿಗಳನೊಪ್ಪದಿಂ ಸೂಡಿ
ಹೊಳಹೊಳೆವುತಿರ್ಪ ಪೊಂಬಟ್ಟೆಯಂ ಬಿಗಿದುಟ್ಟು
ಘುಳುಘುಳಿಪ ಹೊಸತೊಡರನೆಡಗಾಲೊಳೊಲಿದಿಟ್ಟು
ಆರಾಧಿಸುತ್ತಿರ್ಪ ಅಸಿಫಳಕಮಂ ಕೊಂಡು
ವೀರನಾರುತ್ತೆ ಬಾಹಪ್ಪಳಿಸಿ ಕೈಕೊಂಡು
ಕೂರಸಿ ಕಠಾರಿಗಳನಲ್ಲಲ್ಲಿಗಳವಡಿಸಿ
ಮಾರಾರಿ ಮೆಚ್ಚಲು ಉಬುಬುಬೆನುತ್ತಬ್ಬರಿಸಿ

೧ ದಪೆ (ಅ). ೨ ಅದು ತಾವು ಬೇಡಿತ್ತು ಬಂದುದೆಮಗೆನುತಮಿರೆ (ಬ,ಮ). ೩ ದ್ದ ೪ ದಾವುದರಿದೆಂದೆ (ಬ,ಮ). ೫ ಕಿನಿತ್ತಂ (ಬ,ಮ). ೬ ದಿಂದಿ (ಅ). ೭ ನೆ (ಅ,ಬ,ಮ). ೮ ಹೋ (ಬ, ಮ). ೯ ವೆಂಜರಿಸದೆನ್ನ (ಅ). ೧೦ ಮಂ (ಬ,ಮ). ೧೧ ರಿಂ (ಅ). ೧೨ ನೋಡಿ (ಬ,ಮ). ೧೩ ನಿ (ಅ). ೧೪ ಜ್ಗೇ (ಅ).

ಬಾಳ್ಗಿನ್ನ ಭಕ್ತರೆನುತವರ ಪದಮಂ ಮುಟ್ಟಿ
ತೋಳ್ಗೆ ವೀರಶ್ರೀಯ ಹೊಸಪಟ್ಟಮಂ ಕಟ್ಟಿ
ಹರನೇಕನಿಷ್ಠೆಯಂ ಕರಣಂಗಳಿಂ ಮುತ್ತಿ
ಶ[1]ರಣತತಿಗಿ[2]ಲ್ಲೆನ್ನ[2]ದುಪ್ಪರಗುಡಿಯನೆತ್ತಿ
ನಡೆ ದೇವ ಸೀವಂಜಲೇಕೆನುತ್ತಂ ಮುಂದೆ
ನಡೆತಂದನಪ್ರತಿಮನಥಟನುರವಣೆಯಿಂದೆ
ಸಮೆದ ಮಖಮಂ ಸುಡುವ ವೀರಭದ್ರನ ತೆಱದೆ
ಅಮುಮ ಸಮರಕೆ ನಡೆವ ಉಗ್ರಶರಭನ ತೆಱದೆ
ಉರವಣಿಸಿ ನಡೆದು ಕಿಱಿದಂತರಂ ಬರುತಿರಲು
ನೆರೆದು ಘುಳುಘುಳಿಸುತಂ ಮುಂದೆ ಪೆರ್ಬಲವಿರಲು
ಲೆಕ್ಕಿಸದೆ ಕೈಕೊಳ್ಳದೀಕ್ಷಿಸದೆ ಹೋಗುತಿರೆ
ಎಕ್ಕೆಕ್ಕೆಯಿಂದ [3]ಬಲವೆಯ್ದಿ ಮೂದಲಿಸು[3]ತಿರೆ
ಪೋಗದಿರ್ ಪೋಗದಿರಿಹಪಗೆಯ ನಿಲ್ಲೆಂದು
ಆಗದಾಗದು [4]ಹೋಗಲಾಗದೆ[4]ನುತಂ ಬಂದು
ಮೆಯ್ದೋಱಿ ಬುದ್ಧಿವೇಳ್ವರಸುನಂಟರ್ಕಳಂ
ಹೊಯ್ದನಿಕ್ಕಡಿಯಾಗಿ ರಣಮೊನೆಯುಲವರ್ಗಳಂ
ಹೊಯ್ಯೆ ಕೋಪಿಸಿ ಗಜಱಿ ಗರ್ಜಿಸುತೆ ಮಾರ್ಬಲಂ
ಅಯ್ಯಯ್ಯ. ಇನ್ನ[5]ಱಿಯಲಕ್ಕೆನುತ್ತಂ ನೆಲಂ
ಕವಿದಿಕ್ಕಿದಂತೆ ನೆಱೆಮುತ್ತಿ ಮುಸುಱುತ್ತಿರಲು
ತವತವಗೆ ನಾಲ್ದೆಸೆಯೊಳಾರ್ದು ಮಸಗುತ್ತಿರಲು
ಕಂಡಿಹಪಗೆಯೊಂಡನಂತಂತೆ ಘೂರ್ಮಿಸುತೆ
ತಂಡತಂಡದಿ ತಱಿವೆನೆಂದು ಹಲುಮೊರೆವುತ್ತೆ
ತಟ ತಟ [6]ತಟಂ ಥಟೆನೆ[6] ಭುಜಸ್ಫಾಳನಂ ಮಾಡಿ
ತಟ ಘಿಱಿಱಿ ಘಿಱಿಱಿ[7]ನುತೆ[7] ಮುಳಿದು ದಿಟ್ಟಿಸಿನೋಡಿ
ಹರಿದು ಗಜದೊಡ್ಡನೊಡೆದುಚ್ಚಳಿಸಿ ಪಡಿಸಲಿಸಿ
ತಿರಿಗಿ ತಾರುಂತಟ್ಟುವಾಯ್ದು ಬಲವೊಬ್ಬುಳಿಸಿ
ಬೆಬ್ಬಳಿಸುತಲ್ಲಾಡಿ ಘೋಳೆಂದು ಮೆದೆಗೆಡೆಯೆ
ಅಬ್ಬರಿಸುತೆಂತಕ್ಕೆ ಗಱಿಗಟ್ಟಿ ಮಾರ್ಮಲೆಯೆ

---

೧ ಕ (ಮ). ೨ ದಿೞಲ್ಲ (ಅ), ಲೆನ್ನ (ಮ). ೩ ಮೂದಲಿಸಿ ಬಲವೆಯ್ದು (ಬ,ಮ). ೪ ಕೊಂಡು ಹೋಗಲೆ (ಅ), ಹೋಗಲೆ (ಬ). ೫ ನ್ನಿ (ಬ,ಮ). ೬ ಥಟಂಥಟ (ಬ,ಮ). ೭ ನಿಸಿ (ಬ).

ನಿಂದಿರ್ದ ವೀರಭಟರಂ ಕಂಡು ಮುಳಿದಲ್ಲಿ
ಸಂದಣಿಸಿ ಕೂರಸಿಯೊಳಿಟ್ಟಣಿಸಿ ಹೊಯ್ದಲ್ಲಿ
ಖಟಿಲೆಂಬ ಖಣಿಲೆಂಬ [೧]ನೆಳೆ[೧]ಲೆಂಬ ನೆ[೨]ರ್ಕೆಂಬ
ಘಣಿಲೆಂಬ ಘಣ್ಮೆಂಬ ದೊಗಹೆಂಬ ದೊಕ್ಕೆಂಬ
ಸಜ[೩]ಂಬ ಘರಿಲೆಂಬ [೩]ಧಗಿ[೩]ಲೆಂಬ ಭುಗಿಲೆಂಬ
ಝೊಜ್ಜ[೩]ಂಬ ಝುಮ್ಮೆಂಬ ಚಕ್ಕೆಂಬ ಚೊ[೪]ಕ್ಕೆಂಬ
ಢಡಲೆಂಬ ಛಟಲೆಂಬ [೫]ಧೊಪ್ಪೆಂಬ ಧಿಪ್ಪೆಂಬ[೫]
ದುಡುಹೆಂಬ ದುಮ್ಮೆಂಬ ಘೋರೆಂಬ ಭೋರೆಂಬ
ಕೂರಸಿಗಳುರವಣೆಯ ದನಿಯುಡಸುತಂ ಪುಟ್ಟೆ
ವೀರರಂ ತಲೆ[೬]ಗಡಿದ [೭]ನೆತ್ತ್ರ[೭] ಕಡಲ್ಕಟ್ಟೆ
[೮]ಚಿಕ್ಕುದಱ[೯]ದಂ[೮]ತಾಗೆ ತಳ್ತ ಕೂರಾಳ್ಗಳಂ
ಮಿಕ್ಕು ತನ್ನಯ ಮೇಲೆ ನೂಂಕುವ ಗಜಂಗಳಂ
ಬಗಿದು ಕುಂಭಸ್ಥಳವನಿಱಿವುತೆ ವಿದಾರಿಸುತೆ
ಉಗಿವುತಿಬ್ಬಗಿಮಾಡಿ ಛೀಳಿಡಲು ಘಾತಿಸುತೆ
ನೆತ್ತರ್ವರಿದು ಮುತ್ತು ಝಲ್ಲೆನಲು ಸೂಸುತ್ತೆ
ಒತ್ತಿ ಕೊಂಬಂ ನೆಟನೆಟನಲುಡಿದು ಬಿಸುಡುತ್ತೆ
ಭರಿಕೈ ಮೊದಲ್ಗೊಂಡು ಪಂಚಕಂಬರ ಸೀಳ್ದು
ಉರವಣಿಸಿ ದೇಹವಿಭಾಗವಾಗಲು ಸೀಳ್ದು
ನೀಲಗಿರಿಗಳ ಮಱ[೯]ಗಳಂ ಪೋಳ್ದು ಬಿಸುಟಂತೆ
ಹೂಳ್ಕೆಹೊಕ್ಕಿಭದೊಡ್ಡ[೧೦]ನೆಡೆ[೧೦]ಗೆಡಹುತಂ ಮುಂತೆ
ಕವಿತಪ್ಪ ತುರಗಬಲದುರವಣೆಯನೀಕ್ಷಿಸುತೆ
ಶಿವಗಣಗನತ್ಯುಗ್ರರೂಪಿಂದೆ ಕೋಪಿಸುತೆ
ಹರಿದು ಸರಿಬೆಸನಾಗಿ ಖಂಡಿಸುತೆ ತುಂಡಿಸುತೆ
ತಿರಿಗಿ ಛಟಲೆನೆ ಹೊಡೆದು ತಗ್ಗಿಸುತೆ ಮ[೧೧]ಗ್ಗಿಸುತೆ
ಉರವಣಿಸುವಧಟರಂ ಬೆರಸುತ್ತೆಯೊರಸುತ್ತೆ
ತುರಗಬ[೧೨]ಲವುಂ ಹರಂ ಬಣ್ಣಿಸಲು ಸಣ್ಣಿಸುತೆ
ರಾವುತರನಸಿಮುಖಕ್ಕಾಹುತಿಗಳಂ ಕು[೧೩]ಡುತೆ
ಏವೇಳ್ವೆನೆಯ್ತರ್ಪ ರಥಕುಲವನೀಕ್ಷಿಸುತೆ

---

೧ ನಿಣ (ಬ,ಮ). ೨ ನಿ (ಬ,ಮ). ೩ ನಿಟ (ಬ,ಮ). ೪ ಚು (ಬ,ಮ). ೫ ದುಡುಹೆಂಬ ಘುಕ್ಕೆಂಬ (ಬ,ಮ). ೬ ಡಿ (ಬ,ಮ). ೭ ನೆತ್ತಂ (ಅ). ೮ ಒಕ್ಕದರಿಡಂ ೯ ಣೆ (ಬ). ೧೦ ನಡಿ (ಅ). ೧೧ ನು (ಬ,ಮ). ೧೨ ಕು (ಬ,ಮ). ೧೩ ಕೊ (ಅ).

ನೆಗೆದು ರಥದೊಳು ಪೊಗುತ್ತೊಗೆದು ಘಲ್ಲಿಸಿ ಮಸಗೆ
ಸುಗಿದು ಫಳಫಳಲೆಸಲ್ಕಳಚುತಿರೆ ನಾಲ್ದೆಸೆಗೆ
ಅಚ್ಚುಡಿದು ಕೀಲ್ಮುಱಿದು ಬಿಚ್ಚಿ ಬೇಱಾಗಿರಲು
ನುಚ್ಚುನೂಱಿಂ ಮಾಡೆ ಶೂಲಿ ಮೆಚ್ಚುತ್ತಿರಲು
ಇಂತು ಚತುರಂಗಬಲವಂ ನೆಱೆ ಪಡಲ್ವಡಿಸಿ
ಸಂತತಂ [೧]ಶಿವ[೧]ನಲ್ಲಿಗೈತಂದ[೨]ನಸುವೆರಸಿ[೨]
ಹೂತ ಮುತ್ತದ ತೇಱದೆ ಕುಸುರಿದಱಿ[೩]ದೊಡಲೊಳಿರೆ
ನೂತನಾಸ್ತ್ರಂಗಳಿಮ್ಮೈಗಂಡು ಸೂಸುತಿರೆ
ಬಳಸುವೊಱಿ[೪]ದೆಱೆ[೪]ವಾಯಿ ದುಱುದುಱನೆ ನುಡಿವುತಿರೆ
ಎಳೆವ ಕರುಳ್ಗಳ ಮಾಲೆ ಕಾಲೊ[೫]ಳಂ ಸುತ್ತು[೫]ತಿರೆ
ಬಂದನುತ್ಸವದಿಂದೆ ಶಿವಭಕ್ತನಿದ್ದೆಡೆಗೆ
ಇಂದುಧರಮೂರ್ತಿ ಬಿಜಯಂಗೈವುದೊಲಿದೆಡೆಗೆ
ದೇವ ಇನ್ನಾವುದುಂ ಭಯವಿಲ್ಲ ನಡೆವುದೆನೆ
ದೇವಭಕ್ತ[೬]ರುಮವನ[೬] ತೂಪಿಱಿವುತಂ ಮಗನೆ
ನೊಂದಾ ಬಳಲ್ದ ಕಂದಾ ಹೋಗಬಱ[೭]ಕ್ಕುಮೋ
ಮುಂದಾ[೮]ರುವಿ[೮]ಲ್ಲಲೇ ಸುಯಿದಾನಮಕ್ಕು[೭]ಮೋ
ನೋಡುತಿರು ನೀ[೯]ನಿನಿತು[೯] ಬೇಗವೆನುತಂ ನಡೆದು
ನಾಡೆ ಮನದೊಳಗೆ ಬೆಱಗಾಗಿ ರಾಗಂಬಡೆದು
ಇಲ್ಲಿಂದ ಮೇ[೯]ಲಿನ್ನು[೯] ಕಾಡಲೆನ್ನಳವಲ್ಲ
ಬಲ್ಲದನಿಹಃಪಗೆಯನೋಸರಿಸುವವನಲ್ಲ
ಎನುತೆ ಕಾಬ[೧೦]ಳತೆಯೊಳು ನಿಂದು ಶಶಿಧರನಲ್ಲಿ
ವನಿತೆ ಪತಿಹಿತವೆಗೆ ನಿಜಂದೋಱುತಿರಲಲ್ಲಿ
ಪತಿಹಿತವೆ ಕಂಡಿಹಃಪಗೆಯಾಂಡ ಬಾ ಬಾರ
ಅತಿಕರಂ ಲೇಸಾಯ್ತು [೧೧]ಬಾರ ಎಲೆಲೆಲೆ[೧೧] ಬಾರ
ಎನಲದಾವವನಡ್ಡವಾದ[೧೨]ನೆಲೆಲೇಯೆನುತೆ
ಮುನಿದು ಸಿತಕರ ಗಂಡನುರವಣೆಸುತೆಯ್ತರುತೆ

೧ ಹರ (ಅ). ೨ ಸುರವಣಿಸಿ (ಅ) ೩ ಲ್ಗ (ಅ). ೪ ಮರ್ಣನವೆ (ಅ). ೫ ಲ (ಬ,ಮ). ೬ ವುದಿ (ಅ). ೭ ಕ್ಕುರ್ಕ (ಬ,ಮ). ೮ ಸಿಂತು (ಬ,ಮ). ೯ ಲೆನಗೆ (ಅ). ೧೦ ಣ್ಬ (ಅ). ೧೧ ಬಾರೆಲೆಲೆ ಬಾ (ಅ). ೧೨ ಯ್ದ (ಅ,.

ಬರೆ ಪತಿಹಿತವೆ ನೋಡ ದೇವರಿವರೆನುತಿರಲು
ಪುರುಳೆ ಮುನ್ನಾರೆಂದು ಕೊಟ್ಟೆನೆಂದೆನುತಿರಲು
ದಶಭುಜಂ ಪಂಚವಕ್ತ್ರಂ ತ್ರಿಣೇತ್ರದಿನೊಪ್ಪೆ
ಶಶಿಕಳೆ ೧ಸುರಾಪಗೆಗಳಿಂ ಜಟಾಭರವೊಪ್ಪೆ೧
ಫಣಿಕಟಕಕುಂಡಲಂ ಕೊರಳಗರಳದಿನೊಪ್ಪೆ
ಎಣೆಯುಗಲದಗಜೆ ಗಜಚರ್ಮಂಗಳಿಂದೊಪ್ಪೆ
ಡಮರುಗ ಪಿನಾಕ ತ್ರಿಶೂಲಂಗಳಿಂದೊಪ್ಪೆ
ಅಮರ್ದ ಭಸಿತಾಂಗದಿಂ ಪುಲಿದೊವಲೊಳಂದೊಪ್ಪೆ
ಕೋಟಿರವಿತೇಜಮಂ ಮಸುಳಿಸುತೆ ಪಸರಿಸುತೆ
ಕೋಟಿಶಶಿಕಾಂತಿಯಂ ಭಂಜಿಸುತೆ ರಂಜಿಸುತೆ

ಇರೆ ಕಂಡಿಹಃಪಗೆಯನಸಿಫಳಕಮಂ ೨ಬಿಸುಟು೨
ಹರುಷದಿಂದವಱೊಡನೆ ಭವದುಃಖಮಂ ೩ಬಿಸುಟು೩
ನೆಱೆ ಸದಾಶಿವನ ಮೆಲ್ಲಡಿಗಳಂ ಬಿಗಿಯಪ್ಪಿ
ಒಱೆತೋಗುವ ಶಿವಸುಖಾನಂದಾಶ್ರುವಿಂದಳಪ್ಪಿ
ಇಂತು ಬರ್ಪರೆ ನಿಮ್ಮನಱುಹಿಸದೆ ಎಲೆ ದೇವ
ಇಂತು ನೋಳ್ಪರೆಯೆನ್ನ ಮನ೫ವೆನಿತ್ತೆ೫ಲೆ ದೇವ
ಆನೊರ್ಬನೆಂದು ಚಿತ್ತದೊಳಿರ್ದುದೇ ತಂದೆ
ಏನೆಂಬೆನೆನ್ನ ಪುಣ್ಯದ ಫಲವನೆಲೆ ತಂದೆ
ಇನಿತು೪ವರ೪ ನಿಂದು ೬ನಿಜ೬ಪದತಳಂ ನೊಂದವೇ
ಇನಿತು ಬೇಗಂ ನೋಡಿ ಕಣ್ಣೆಲ್ಲ ನೊಂದವೇ
ಮೇಲೆ ನೆತ್ತರ್ಚಿಮ್ಮಿತೇ ಪೇಳೆಲೇ ತಂದೆ
ಶೂಲಿ ಹೊಲಸಿನ ನಾತದೊಳಗೆ ನಿಂದೈ ತಂದೆ
ಅಪರಾಧಮಂ ಸೈರಿಪುದು ಸದಾಶಿವ ಎಂದು
ಕಪಟಮನನಾ ನಿಮ್ಮ ನೋಯಿಸಿದೆ೭ಲ೭ನೇಯೆಂದು೮

ಇರೆ ಪೂಮಳೆಗಳೆಱಗಿ ಸುರಿದವಾತನ ಮೇಲೆ
ಪರಿಪರಿಯ ದುಂದುಭಿಸ್ವನಮುಣ್ಮಿದವು ಮೇಲೆ

---

೧ ಜಟಾಸುರಸುರಾಪಗೆಗಳಿಂದೊಪ್ಪೆ (ಬ,ಮ). ೨ ಬಿಟ್ಟು (ಅ). ೩ ಬಿಟ್ಟು (ಅ). ೪ ದೊ (ಅ). ೫ ವದನಿತೆ (ಅ). ೬ ಬೇಗಂ (ಬ,ಮ). ೭ × (ಬ,ಮ). ೮ ನೆನುತಂದು (ಬ,ಮ).

ಮೃದುಮೃದಂ[೧]ಗದಂ ಕಹಳೆಗಳ ಬಹಳ ರವವೆಸೆಯೆ
ಪದೆದು ಪೂರ್ಕೈಪ ಶಂಖಧ್ವಾನವಂದೊಗೆಯೆ
ಆ ಸಮಯದೊಳು ಶಿವನಸಜಸಿಕೊಳುತಂ ಬಂದ[೨]
ಭಾಸುರಂ ಮಿಗುತಿರೆ ಗಣೇಶ್ವರರು ನಡೆತಂದ[೩]
ರಲ್ಲಿ ನಂಡೀಶ್ವರಂ ವೀರಭದ್ರಾದಿಗಳು
ಸಲ್ಲೀಲೆಯಿಂ ಭಕ್ತಿ[೪]ಸುಖರಸಾಸ್ವಾದಿಗಳು
ಬರೆ ಕಂಡು ನಂದೀಶನಂ ಕರೆದು ಶಂಕರಂ
ಧರೆಗೆ ಪೊಸತೀ ಭಕ್ತನಿಂತು ಮಾಡಿತು[೫] ಕರಂ
ತನ್ನ ಮನದ[೬]ನ್ನಳಂ[೬] ಬೇಡಲಿತ್ತವರುಂಟೆ
ಎನ್ನ [೭]ಶೀಘ್ರದ ವಿಷಮ[೭] ಘಾತಿಗಾಂತವರುಂಟೆ
ಈ ಬಲವನೊಂದೆ[೮] [೯]ತೋಳೊಳ್[೯] ಗೆಲಿದಘಟರುಂಟೆ
ಈ ಬಲ್ಪಿನುರವಣೆಯ ಭಕ್ತಿಯಿತರರ್ಗುಂಟೆ
ನೋಡಿಹಃಪಗೆಯಾಂಡರ[೧೦]ರವ[೧೦]ನೆಲೆ ನಂದೀಶ
ನೋಡಲದ್ಭುತದ ಸಂಗರವ ನೀ[೧೧] ನಂದೀಶ
ಎನುತೆತ್ತಿ ತನುದಡವಿ ಕಣ್ಣನೀರಂ ತೊಡೆದು
ಮನವಾರೆಯಪ್ಪಿ ಮೂರ್ಧ್ನಿಘ್ರಾಣಮಂ ಪಡೆದು
ಕೇಳ ನಂದೀಶ ನೆಜತೆ ಕಲಿಗಳೆನ್ನಯ ಭಕ್ತ
ರಾಳ ನೋಡದರೊತ್ತುವೋಗರೆನ್ನಯ ಭಕ್ತ
ರಭವ[೧೨]ರಾನಂದ[೧೨]ರಪ್ರತಿಮರೆನ್ನಯ ಭಕ್ತ
ರಭಿಮಾನಿಗಳ್ಮೌನಿಗಳ್ಜ್ಞಾನಿಗಳ್ ಭಕ್ತ
ರಾನೆ ವರವೆಂದು ಬಯಸಿರ್ಪರೆನ್ನಯ ಭಕ್ತ
ರೇನುವಂ [೧೩]ಬೇಡರೆ ಮತ್ತ[೧೩]ಡಿಯರೆನ್ನಯ ಭಕ್ತ
ರತಿ[೧೪]ಮಾಗುದರತಿ ಚೆಲ್ಲ[೧೪]ರಧಿಕರೆನ್ನಯ ಭಕ್ತ
ರತಿಗುಪ್ತರತಿಶಕ್ತರಚಲರೆನ್ನಯ ಭಕ್ತ

---

೧ ಗಂ (ಅ). ೨ ದು (ಬ,ಮ). ೩ ದು (ಮ). ೪ ಕ್ತ (ಅ). ೫ ದ(ಅ). ೬ ಬಲೆಯಂ (ಬ,ಮ). ೭ ತೀವ್ರದ ನುಡಿಯ (ಅ). ೮ ಪು (ಅ,ಬ). ೯ ತೊಳಲು (ಬ,ಮ). ೧೦ ಪರ (ಬ,ಮ). ೧೧ ನೆಲೆ (ಅ). ೧೨ ರಾಸಿಂಧ್ಯ (ಬ,ಮ). ೧೩ ಮತ್ತೆ ಬೇಜ (ಬ,ಮ). ೧೪ ಮಾತ್ರರತಿಯಾಸ್ತ (ಬ,ಮ).

ರೆನುತೆ ಪುಳಕಿಸುತೆ ನಯನಾಶ್ರುವಂ ಸೂಸುತ್ತೆ
ಮನವೊಲಿದು ಗಣತತಿಗೆ ಹೇಳುತ್ತೆ ಹಿಗ್ಗುತ್ತೆ

ಇರೆ ಸುವರ್ಣದ ವಿಮಾನದ್ವಯಮುಮಂ ತಂದು
ಇರಿಸೆ ನಂದೀಶನುತ್ಸವದೊಳಿರ್ಬರ್ಗೆಂದು
ಅವನೀಕ್ಷಿಸುತ್ತೆಯ್ದೆವೆಯ್ದೆವೆ[1]ಲೆ ನಂದೀಶ
ಇವನ[2] ಕೈಯಿಂದೆ ಹತವಾದರ್ಗೆ ನಂದೀಶ
ಎನ್ನ ಭಕ್ತನ ಬಾಳ್ಗೆ ಗುಜಿಯಾದವರ್ಗೆಲ್ಲ
ರನ್ನದ ವಿಮಾನಂಗಳಂ ತರಿಸೆನಲ್ಕೆಲ್ಲ
ರೆಯ್ದಿದರು ಕೈಲಾಸಗಿರಿಗೆ ಗಣಸಂಕುಳಂ
ಅಯ್ದಿ ತಂದರ್ವಿಲಾಸದ ವಿಮಾನಂಗಳಂ
ತರಲಿಹಃಪಗೆಯುರಾ. ಪತಿಹಿತವೆ ಮೊದಲಾಗಿ
ಇರಿಸಿದರ್ಮಡಿದವರ್ಗಳೆಲ್ಲರುಂ ಸಹಿತಾಗಿ
ನೆಗೆದವು ವಿಮಾನಂಗಳಂಬರಸ್ಥಳದಲ್ಲಿ
ಒಗೆದವು ಶಿವಪ್ರಘೋಷಂ ದುಂದುಭಿಗಳಲ್ಲಿ
ಆಗಸಂ ಹೂತಂತೆ ಪುಷ್ಪಕಂಗಳು ತುಱುಗಿ
ಹೋಗುತಿರ್ದವು ರಜತಗಿರಿಯತ್ತ ಮುಂತಾಗಿ

ಇಂತು ಕೈಲಾಸಕ್ಕೆ ಬಂದಿಂದುಶೇಖರಂ
ಸಂತಸದೆ ಹಿಗ್ಗುತ್ತೆ ನೋಡಿ ಕರುಣಾಕರಂ
ನಲಿದಿಹಃಪಗೆಯುರಂ ಗಣ[3]ಪದವಿಯೊಳಗಿರಿಸಿ
ಒಲವಿಂದೆ ಮಿಕ್ಕರಂ ಃಶಿವಲೋಕದೊಃಳಗಿರಿಸಿ
ರಜತಗಿರಿಸಿಂಹಾಸನಾರೂಢನೊಪ್ಪಿದಂ
ನಿಜಗುಣವ್ರಜಪರಿವೃತಾ[4]ಶೇಷ[4]ನೊಪ್ಪಿದಂ
ಸದ್ಭಕ್ತಹೃದಯನಿತ್ಯಾವಾಸನೊಪ್ಪಿದಂ
ಸದ್ಭಕ್ತಜನತನು[5]ಸುಖಾಸೀನನೊಪ್ಪಿದಂ
ಅಮ್ಮಮ್ಮ ದೇವಾಧಿದೇವಪತಿಯೊಪ್ಪಿದಂ
ಎಮ್ಮ ಹಂಪೆಯ ವಿರೂಪಾಕ್ಷನಿಂತೊಪ್ಪಿದಂ

---

೧ ನೆ (ಬ,ಮ). ೨ ರ (ಬ,ಮ). ೩ ಗಣಪದವಿಯೊ (ಮ). ೪ ಧೀಶ (ಅ).
೫ ಸುತ (ಬ,ಮ).

ಹರ ನಿಮ[೧]ಗೊಲಿವಿಂದಂ ತ
ನ್ನರಸಿಯುನೊಸೆದಿತ್ತು ದೇವಗಣಪದವಿಯುನಾ
ದರದೆ ಪಡೆದಿಹಃಪಗೆಯಾಂ
ಡರ [೨]ತೊತ್ತೆನಿಸೆನ್ನ[೨] ಹಂಪೆಯ [೩]ವಿರೂಪಾಕ್ಷಾ[೩] ||

ಇಹಃಪಗೆಯಾಂಡರ ರಗಳೆ ಸಮಾಪ್ತಂ



೧ ಸ (ಬ,ಪು). ೨ ಚರಣಕೆ ಶರಣವೆನಗೆ (ಅ). ೩ ರಾಯನಾ (ಅ).

ಶ್ರೀ

ಇಂದುಧರ ೧ನಿಮ್ಮ೧ ಬೆರಸಿ
ದರ್ಂದಿನ ಇಳೆಯಾಂಡಗುಡಿಯಮಾರರ ಚರಿ೨ತವ೨
ಸಂದಣಿ೩ಪ ವಚನರಚನೆ೩ಗ
ಳಿಂ೪ದಂ೪ ಕೇಳಯ್ಯ ಹಂಪೆಯ ವಿರೂಪಾಕ್ಷಾ ||

ಶ್ರೀ ೫ಶಿವನ ೬ಸಜ್ಜೆಯೆನಿಸುವ೬ ಚೋಳದೇಶದೊಳು
ಭಾಸುರವೆ೭ನಿಸಿ೭ ಮೆಱೆವುದೊಂದು ಪುರವೊಪ್ಪದೊಳು
ಇ೮ಳೆಯಾಂಡಗುಡಿಯೆಂಬುದದಱೊಳನುರಾಗದಿಂ
ಇಳೆಯಾಂಡಗುಡಿಮಾರ೯ನೆಂದೆಂಬ೯ ನಾಮದಿಂ
ಎಸೆದಿರ್ಪನೊರ್ಬ ಭಕ್ತಂ ಶಿವನ ೧೦ಕುಡಿಮಗಂ೧೦
ವಸುಧೆಗೊಪ್ಪುವ ಮಹಾದೇವನೊಕ್ಕಲಮಗಂ
೧೧ಇಂತಿರ್ದು ಶಿವನನರ್ಚಿಸಲೆಂದು ಮನದಂದು೧೧
ಸಂತತಂ ೧೨ಶರಣರಿಚ್ಛೆಯನೆ ಸಲಿಸಲ್ಕೆಂದು೧೨
ಸಮಚಿತ್ತ೧೩ವೆಂಬ೧೩ ಭೂಮಿಯನೆ ಹಸನಾಗಿರಿಸಿ
ಅಮರ್ದ ಶಂಕರನ ನೆನಹೆಂಬ ನೇಗಿಲನಿರಿಸಿ
ಅರಿ೧೪ವರ್ಗವಾಱುವಂ೧೪ ಹೂಡುವೆತ್ತಂ ಮಾಡಿ
ಹರಿವ ಮನವಂ ಕಟ್ಟಿ ಹಿಡಿವ ಹಗ್ಗಂ ಮಾಡಿ
ಗರ್ವಿಸುವಹಂಕಾರ೧೫ಮುಮಂ೧೫ನಚ್ಚುವಂ ಮಾಡಿ
ಸ೧೬ರ್ವೇಶನಿಷ್ಠೆಯುಂ ತಳಿವ ಬೀಜಂ೧೭ ಮಾಡಿ
ಸುರುಚಿರ ಶಿವಜ್ಞಾನ ೧೮ಶಶಿಕರಂ ಸೋಂಕುತಿರೆ೧೮
ಹರನ ಪರಮಾನಂದರಸದ ಮಳೆ೧೯ಕೊಳುತಮಿರೆ೧೯

---

೧ ನಿನ್ನ (ಹ). ೨ ತೆಯ (ಬ, ಮ, ಹ). ೩ ಪ ಮಧುರ ವಚನ (ಹ). ಕು ಮಾತನ ರಚನೆ (ಮ). ೪ ದೊರೆವೆಂ (ಹ). ೫ +ಸದಾ (ಬ, ಮ). ೬ ಭಕ್ತಿಯ (ಬ, ಮ). ೭ ನಲ್ (ಬ) ೮ ಎ (ಅ). ೯ ನಾರೆಂಬ (ಹ). ೧೦ ಪೊಲುಮೆಯಂ (ಅ). ೧೧ ಇಂತಿರಲ್ ಶಿವಭಕ್ತಿ ಚಿತ್ತದೊಳ್ ನಳನಳಿಸೆ (ಹ). ೧೨ ಹರನೊಲವು ಕರಣದೊಳ್ ಪಲ್ಲವಿಸೆ (ಹ). ೧೩ ವೆಸಿಪ (ಬ, ಮ). ೧೪ ಷಡುವರ್ಗಮಂ (ಬ, ಮ), ಷಟ್ಕಮಂ ತಂದು (ಹ). ೧೫ ಗಳ (ಬ, ಮ). ೧೬ ಶ (ಅ). ೧೭ ವ (ಅ). ೧೮ ಸಸಿಗಳಂಕುರಿಸುತಿರೆ (ಹ), ಶಶಿಕರಂ ಪೊಪ್ಪುತಿರೆ (ಬ, ಮ). ೧೯ ಕರೆವುತಿರೆ (ಹ).

ಬಿತ್ತಿ ಬೆಳೆವಂ ಶಿವನ ಸದ್ಭಕ್ತಿ [೧]ಸಸಿ[೧]ಗಳಂ
ಕಿತ್ತು ಕಳೆವಂ [೨]ಮೊಳೆವ ಪಾಪಾದಿ[೨] ಕಳೆಗಳಂ
[೩]ಇಂತು ತನ್ನೊಳಗೆ[೩] ಭಕ್ತ್ಯಾರಂಭವಂ ಮಾಳ್ಪ
ಅಂತೆಲ್ಲರಱಿಯ ಹೊಱಗಾರಂಭವಂ ಮಾಳ್ಪ
ಏನೆಂಬೆನತಿಭಕ್ತಿ[೪]ಸಸಿ[೪]ಯ ಬೆಳೆ ಸಿರಿವಂತ
ಆನಂದದಿಂ [೫]ಶರಣ[೫]ತತಿಗೀವ ಮತಿವಂತ
ಎನಿತು ಭಕ್ತರ್ಬಂದಡನಿತು ಹೊರೆಯೋಱುವಂ
ಮನದೊಳಗೆ ಹೆಚ್ಚಿ[೬] ಕಿಂಕರತೆ[೭]ಯಂ ತೋ[೭]ಱುವಂ
[೮] ಧರೆಯೆನಿತು ಭೂಮಿ ತನಗುಂಟನಿತ ನೆಱೆಬೆಳಸಿ
ಉರವಣಿಸಿ ಶರಣತತಿಗೀವನೆನಿತಕ್ಕೆಳಸಿ[೮]
ಒಳ್ಳಿತಂ [೯]ಸೊರ್ಗ[೯]ಸಿತಂ ಶಿವನ ಭಕ್ತರ್ಗೀವ
[೧೦]ನುಳ್ಳುದಂ ನವ್ಯಮಂ ಶಿವನ[೧೦] ಭಕ್ತರ್ಗೀವ
ಎಲ್ಲ ತೇಜಂಗಳಂ ಶರಣತತಿಗೀವುತಂ
ಎಲ್ಲ ಮಾನ್ಯಂಗಳಂ [೧೧]ಭಕ್ತರ್ಗೆ[೧೧] ಸಾರ್ಚುತಂ
ಬಿಟ್ಟ ಬೆಸಸಂ ಶಿವನ ಭಕ್ತರ್ಗೆ ಮಾಡುವಂ[೧೨]
ಕೊಟ್ಟು [೧೩]ತಣು[೧೩]ವಿಲ್ಲದನುತಾಪದಿಂ ಬಾ[೧೪]ಡುವಂ[೧೫]

ಇಂತು ಜಂಗಮಕೆ ಮಾಳ್ಪುದು ಕರಂ ಪಿರಿದಾಗೆ
ಸಂತತಂ ಭಕ್ತಕುಲವಱಿದು ಸಂತಸವಾಗೆ
ನೆರೆಯ ತೊಡಗಿತು ಹರನ ಶರಣಕುಲವಳ್ತಿಯಿಂ
ಬರುತಮಿ[೧೬]ರ್ದರು[೧೬] ಭೂತಳದ ಭಕ್ತರೊಲ್ಮೆಯಿಂ
ಮೇರೆದಪ್ಪಿದ ವಾರ್ಧಿಯೆಂತಂತೆ [೧೭]ಕವಿ[೧೭]ವುತಿರೆ
ಧೀರನೋಸರಿಸದೆ ಮಹಾಗಣಂ ಪೊಗಳುತಿರೆ
ತನ್ನರ್ಥಮುಂ ತೀರೆ ಭಕ್ತರ್ಗೆ ನೆಱೆಮಾಡಿ
ಇನ್ನುಳ್ಳುದೇನೆಂದು ನೆನೆದು ಭಕ್ತಂ ನೋಡಿ

---

೧ ಶಶಿ (ಅ). ೨ ಕ್ಷುತ್ಪಿಪಾಸಾದಿ (ಹ). ೩ ಇಂತೊಳಗೆ ಭವನ (ಹ). ೪ ಶಶಿ (ಅ). ೫ ಭಕ್ತ (ಮ). ೬ + ತಪೆ (ಬ, ಮ). ೭ ದೋ (ಬ, ಮ). ೮ ಧಱೆಯೆನಿತು ಉಂಟೆನಿತು ಭೂಮಿಯನಾತಂಗುಂಟು । ಹರನ ಕರುಣಂ ಆತನಲ್ಲಿ ಪಿರಿದಾಗುಂಟು । ಅದಱಿಕೊಳುವ ಬೆಳಸನೀವ ಶರಣರ ಬಂಟ। ಮದಮುಖಮುದೊಂದಿಲ್ಲದೀವ ಭಕ್ತರ ನಂಟ।। (ಹ). ೯ ಸೋ (ಬ, ಮ). ೧೦ ಉಳ್ಳ ದ್ರವ್ಯಂಗಳಂ ಭುವನ (ಹ), ಒಳ್ಳಿತ್ತನರ್ಘ್ಯಮುಂ ಪರನ (ಬ, ಮ). ೧೧ ಶರಣರ್ಗೆ (ಬ, ಮ). ೧೨ ತಂ (ಅ). ೧೩ ದಣಿ (ಬ, ಮ), ತಣಿ (ಹ). ೧೪ ಪೊ (ಬ, ಮ) ೧೫ ತಂ (ಅ). ೧೬ ರ್ದಮ (ಬ, ಮ, ಹ). ೧೭ ನಲಿ (ಬ, ಮ).

